ಕನ್ನಡ ವಿಶ್ವವಿದ್ಯಾಲಯ ಹಂಪಿ




ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ. ಫಿಲ್ ಪದವಿಗಾಗಿ
ಸಲ್ಲಿಸುತ್ತಿರುವ ನಿಬಂಧ

ವಿಷಯ :

# " ಕಥೆಯಾದಳು ಹುಡುಗಿ" ಸಂಕಲನದ ಆಶಯ ಮತ್ತು ಅಭಿವ್ಯಕ್ತಿ

ಸಂಶೋಧನಾ ವಿದ್ಯಾರ್ಥಿ
ನೇತ್ರಾವತಿ ಕೆ.
ನೊಂದಣಿ ಸಂಖ್ಯೆ: ೧೪೨೦೦೧೦೩೦೦೪೦

ಮಾರ್ಗದರ್ಶಕರು
ಡಾ. ವೆಂಕಟಪ್ಪ ಎಂ.ಎ. ಪಿ.ಹೆಚ್.ಡಿ
ಸಹಾಯಕ ಪ್ರಾಧ್ಯಾಪಕರು
ಎಸ್. ಎಲ್. ಎನ್. ಕಾಲೇಜು
ಕೋಟೆ. ಬೆಂಗಳೂರು - ೫೬೦೦೦೨

ಮಾನ್ಯತಾ ಸಂಸ್ಥೆ
ಕನ್ನಡ ಸಾಹಿತ್ಯ ಪರಿಷತ್
ಕನ್ನಡ ಸಂಶೋಧನಾ ಕೇಂದ್ರ
ಪಂಪ ಮಹಾಕವಿ ರಸ್ತೆ.
ಚಾಮರಾಜಪೇಟೆ, ಬೆಂಗಳೂರು - ೫೬೦೦೧೮.

कन्नड — 

ಕನ್ನಡ ವಿಶ್ವವಿದ್ಯಾಲಯ ಹಂಪಿ






ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ. ಫಿಲ್ ಪದವಿಗಾಗಿ
ಸಲ್ಲಿಸುತ್ತಿರುವ ನಿಬಂಧ

ವಿಷಯ:

# “ಕಥೆಯಾದಳು ಹುಡುಗಿ” ಸಂಕಲನದ ಆಶಯ ಮತ್ತು ಅಭಿವ್ಯಕ್ತಿ

ಸಂಶೋಧನಾ ವಿದ್ಯಾರ್ಥಿ

ನೇತ್ರಾವತಿ ಕೆ.

ನೊಂದಣಿ ಸಂಖ್ಯೆ: ೧೪೨೦೦೧೦೩೦೦೪೦

ಮಾರ್ಗದರ್ಶಕರು

**ಡಾ. ವೆಂಕಟಪ್ಪ** ಎಂ.ಎ. ಪಿ.ಹೆಚ್.ಡಿ

ಸಹಾಯಕ ಪ್ರಾಧ್ಯಾಪಕರು

ಎಸ್. ಎಲ್. ಎನ್. ಕಾಲೇಜು

ಕೋಟೆ. ಬೆಂಗಳೂರು – ೫೬೦೦೦೨



ಮಾನ್ಯತಾ ಸಂಸ್ಥೆ

ಕನ್ನಡ ಸಾಹಿತ್ಯ ಪರಿಷತ್

ಕನ್ನಡ ಸಂಶೋಧನಾ ಕೇಂದ್ರ

ಪಂಪ ಮಹಾಕವಿ ರಸ್ತೆ.

ಚಾಮರಾಜ ಪೇಟೆ, ಬೆಂಗಳೂರು – ೫೬೦೦೧೮.

# ದೃಢೀಕರಣ ಪತ್ರ

ನೇತ್ರಾವತಿ ಕೆ ರವರು ಎಂ.ಫಿಲ್ ಪದವಿಗಾಗಿ ಬರೆದು ಸಿದ್ಧಪಡಿಸಿರುವ **ಕಥೆಯಾದಳು ಹುಡುಗಿ ಸಂಕಲನದ ಆಶಯ ಮತ್ತು ಅಭಿವ್ಯಕ್ತಿ** ಎಂಬ ನಿಬಂಧವನ್ನು ಹಂಪಿ ಕನ್ನಡ ವಿಶ್ವವಿದ್ಯಾನಿಲಯಕ್ಕೆ ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ ಸಲ್ಲಿಸಲು ನನ್ನ ಮಾರ್ಗದರ್ಶನದಲ್ಲಿ ಸ್ವತಂತ್ರ ಅಧ್ಯಯನದ ಮೂಲಕ ಸಿದ್ಧಪಡಿಸಿರುತ್ತಾರೆ. ಈ ನಿಬಂಧದ ವಿಷಯವನ್ನು ಅಥವಾ ಇದರ ಯಾವುದೇ ಭಾಗವನ್ನು ಇದಕ್ಕೆ ಮೊದಲು ಬೇರೆ ಯಾವುದೇ ಪದವಿಗಾಗಲಿ ಅಥವಾ ಇನ್ನಿತರ ಉದ್ದೇಶಗಳಿಗಾಗಲಿ ಸಲ್ಲಿಸಿಲ್ಲವೆಂದು ಈ ಮೂಲಕ ದೃಢೀಕರಿಸಿರುತ್ತೇನೆ.

ದಿನಾಂಕ: 31/8/2015
ಸ್ಥಳ: ಬೆಂಗಳೂರು

ಸಹಿ

ಮಾರ್ಗದರ್ಶಕರು
ಡಾ. ವೆಂಕಟಪ್ಪ
ಪ್ರಾಧ್ಯಾಪಕರು
ಸಹಾಯಕ ಪ್ರಾಧ್ಯಾಪಕರು, ಕನ್ನಡ ವಿಭಾಗ
ಎಸ್.ಎಲ್.ಎನ್.ಎಸ್. ಕಾಲೇಜು
ಬೆಂಗಳೂರು–560002

# ಪ್ರಮಾಣ ಪತ್ರ

ಹಂಪಿ ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್ ಪದವಿಗಾಗಿ ಸಲ್ಲಿಸುತ್ತಿರುವ **ಕಥೆಯಾದಳು ಹುಡುಗಿ ಸಂಕಲನದ ಆಶಯ ಮತ್ತು ಅಭಿವ್ಯಕ್ತಿ** ಎಂಬ ಶೀರ್ಷಿಕೆಯ ಈ ಎಂ.ಫಿಲ್ ನಿಬಂಧವನ್ನು ಡಾ. ವೆಂಕಟಪ್ಪ, ಸಹಾಯಕ ಪ್ರಾಧ್ಯಾಪಕರು ಎಸ್.ಎಲ್.ಎನ್. ಕಾಲೇಜು, ಕೋಟೆ, ಬೆಂಗಳೂರು, ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ನಿಬಂಧವನ್ನು ಈ ಮೊದಲು ಯಾವುದೇ ವಿಶ್ವವಿದ್ಯಾಲಯದ ಪದವಿ ಅಥವಾ ಇತರೆ ಉದ್ದೇಶಗಳಿಗಾಗಲಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ದಿನಾಂಕ:೧೩-೦೬-೨೦೧೪
ಸ್ಥಳ: ಬೆಂಗಳೂರು

ನೇತ್ರಾವತಿ ಕೆ.
ಸಂಶೋಧನಾ ವಿಧ್ಯಾರ್ಥಿನಿ.

ಕಥೆಯಾದಳು ಹುಡುಗಿ – ಸಂಕಲನದ ಆಶಯ ಮತ್ತು ಅಭಿವ್ಯಕ್ತಿ

## ಪರಿವಿಡಿ

ಅಧ್ಯಾಯ ೧

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

## ೧.೧. ಪೀಠಿಕೆ.

ಕನ್ನಡ ಕಥಾಲೋಕವನ್ನು ಶ್ರೀಮಂತಗೊಳಿಸಿದ ಕೆಲವೇ ಮಂದಿ ಕಥೆಗಾರರಲ್ಲಿ ಯಶವಂತ ಚಿತ್ತಾಲರು ಒಬ್ಬರು. ತಮ್ಮ ಅಭಿಪ್ರಾಯಗಳಿಗೆ, ಅನಿಸಿಕೆಗಳಿಗೆ ಹಾಗೂ ಪಡೆದ ಅನುಭವಗಳಿಗೆ ಕಾಲ್ಪನಿಕ ಚಿತ್ರಣ ನೀಡಿ ಬರವಣಿಗೆಯ ಮೂಲಕ ಅಭಿವ್ಯಕ್ತಿಗೊಳಿಸಿ; ಅದನ್ನು ತಮ್ಮದೇ ಆದಂತಹ ವಿಶಿಷ್ಟವಾದ ಶೈಲಿಯಲ್ಲಿ ಕಥೆಗಳನ್ನು ಬರೆದವರು. ಅಂತಹ ಬರವಣಿಗೆಯ ಮೂಲಕ ಯಶಸ್ಸನ್ನು ಪಡೆದು ಜನ ಮನ್ನಣೆಗಳಿಸಿದ ಕಥಾ ಸಂಕಲವನೇ "ಕಥೆಯಾದಳು ಹುಡುಗಿ".

ಸಮಕಾಲೀನ ಸಮಾಜದ ಸಮಸ್ಯೆಗಳನ್ನು ತನ್ನ ಮಾಧ್ಯಮದ ಅನನ್ಯತೆಯನ್ನು ಒಂದಿಷ್ಟು ಬಿಟ್ಟುಕೊಡದೆ ಅದರ ಎಲ್ಲ ಸಂಕೀರ್ಣತೆಯೊಂದಿಗೆ ಗ್ರಹಿಸಿರುವುದಕ್ಕೆ ಹಲವಾರು ನಿದರ್ಶನಗಳು ದೊರೆಯುತ್ತವೆ. ಅಲ್ಲದೆ ತಾನು ಕಂಡ ಲೋಕವನ್ನು ತನ್ನ ಓದುಗರೊಂದಿಗೆ ಹಂಚಿಕೊಳ್ಳಬೇಕೆಂಬ ತೀವ್ರ ಹಂಬಲದ ಫಲವಾಗಿ ಕಥೆಗಾರರು ತಮ್ಮ ಬರವಣಿಗೆಯ ಮೂಲಕ ಅಭಿವ್ಯಕ್ತಗೊಳಿಸಿದ್ದಾರೆ.

ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಕಂಡು ಬಂದಿರುವ ಹಲವಾರು ಮಜಲುಗಳನ್ನೇ ಆಂದೋಲನಗಳನ್ನು ಗಮನಿಸಿ, ಸಮಾಜಕ್ಕೆ ಬೇಕಾಗಿರುವ ಮೌಲ್ಯವುಳ್ಳ ಅಂಶಗಳನ್ನು ತಮ್ಮ ಸೃಜನಶೀಲ ಬರವಣಿಗೆಗೆ ಒಡ್ಡಿ ಸಾಮಾಜಿಕ ಮುಖಾಮುಖಿ ಹೊಂದಿರುವ ಕಥೆಗಳನ್ನು ರಚಿಸಿದ್ದಾರೆ.

ಚಿತ್ತಾಲರ ಸೂಕ್ಷ್ಮಾತಿಸೂಕ್ಷ್ಮ ವಿಷಯಗಳನ್ನು ಹೇಳಲು, ತವಕಿಸುವ ಇವರ ಭಾವನೆಗಳಲ್ಲಿ ಹುಟ್ಟಿರುವ ಮಾನವತವಾದ, ಇವರ ಆಶಯಗಳು ಹಾಗೂ ಪಡೆದ ಅನುಭವಗಳನ್ನು ವಿಸ್ತಾರವಾಗಿ, ವೈವಿದ್ಯಪೂರ್ಣವಾಗಿ ಸಂವಹಗೊಳಿಸುವುದನ್ನು ಕಥೆಗಳಲ್ಲಿ ಕಾಣಬಹುದು. ಇವರ ಕಥೆಗಳು ಅಂತಹ ಪ್ರಯೋಗಗಳನ್ನು ಒಳಗೊಂಡಿರುತ್ತವೆ.

---

೧. ಕಥೆಯಾದಳು ಹುಡುಗಿ – ಯಶವಂತ ಚಿತ್ತಾಲ, ಪ್ರಿಸಮ್ ಬುಕ್ ಹೌಸ್, ಬೆಂಗಳೂರು. ೨೦೦೯, ಪುಟ ೯

ಚಿತ್ತಾಲರ ಕಥೆಗಳು ಸಾಮಾನ್ಯ ಓದುಗನ ಗ್ರಹಿಕೆಗೆ ನಿಲುಕುವಂತಹವುಗಳು. ಸಮಷ್ಟಿಯ ನೆಲೆಯಲ್ಲಿ ಓದುಗರನ್ನು ಪಾಲುದಾರನನ್ನಾಗಿ ಮಾಡಿಕೊಂಡು ಅವರ ಮೂಲಕವೇ ಕಾಣದ ಎಷ್ಟೋ ಸತ್ಯಗಳನ್ನು ದರ್ಶನ ಮಾಡಿಸುತ್ತವೆ.

# ೨. ಉದ್ದೇಶ

ಈ ಸಂಕಲನದ ಅಧ್ಯಯನದ ಉದ್ದೇಶವೇ ಮಾನವನ ನೈತಿಕ ಪ್ರಜ್ಞೆಗಳು ಮತ್ತು ಅವನ ಅಂತಃಕರಣ. ಚಿತ್ತಾಲರ ಬದುಕಿನ ಗತಿಗಳು ಸುತ್ತಮುತ್ತಲಿನ ಹನೇಹಳ್ಳಿಯಲ್ಲಿ ಹಾಗೂ ಕಾಸ್ಮೋಪಾಲಿಟನ್ ಸಿಟಿಯಂತಹ ಪ್ರದೇಶವಾದ ಮುಂಬೈ ನಗರದಲ್ಲಿ. ಅಲ್ಲಿ ಪಡೆದಂತಹ ಅನುಭವಗಳು ಹಾಗೂ ಸೂಕ್ಷ್ಮ ವಿಷಯಗಳಿಗೆ ನೈಜ ಚಿತ್ರಣವನ್ನು ನೀಡಿ ಸಾಹಿತ್ಯ ರೂಪಕ್ಕಿಳಿಸಿದ್ದಾರೆ. ಆದ್ದರಿಂದಲೇ ಇವರ ಸಾಹಿತ್ಯ ಇಂದಿಗೂ ಜೀವಕಳೆಯನ್ನು ಹೊಂದಿದೆ.

ಚಿತ್ತಾಲರು ಇತ್ತೀಚೆಗಷ್ಟೆ ಭೂಮಿಯ ಋಣದಿಂದ ಹಾಗೂ ಸಂಬಂಧಗಳ ಬಂಧನದಿಂದ ಮುಕ್ತರಾಗಿ ವಿಧಿವಶರಾದರು. ಇವರ ಬಹು ಕೃತಿಗಳು ಸಂಸಾರದ ಜಂಜಾಟವನ್ನು, ಮನಸ್ಸಿನ ತೊಳಲಾಟವನ್ನು, ಬದುಕಿನ ಅನಿವಾರ್ಯತೆಯನ್ನು, ಸಂವೇದನೆಯನ್ನು ವಿಚಾರವಾದದ ನೆಲೆಯಲ್ಲಿ ಕಟ್ಟಿ ಕೊಟ್ಟಿದ್ದಾರೆ.

ಮಾನವ ಬದುಕಿನ ವಾಸ್ತವತೆಯನ್ನು, ನೈಜ ಚಿತ್ರಣವನ್ನು ಕಂಡು ಕೊಳ್ಳುವಲ್ಲಿ ಚಿತ್ತಾಲರು ಕಂಡುಕೊಂಡದ್ದು ತಮ್ಮ ಬರವಣಿಗೆಯಲ್ಲಿ ವ್ಯಕ್ತವಾಗುವ ಭಾವನೆಗಳನ್ನು ಇವರ ಪ್ರತಿಯೊಂದು ಕಥೆಯಲ್ಲೂ ನಾಯಕ, ನಾಯಕಿಯರಿಗೆ ಅನ್ಯಾಯವಾದರೂ ಸಮಾಜದಲ್ಲಿ ನಡೆಯುತ್ತಿರುವ ದೌರ್ಜನ್ಯಗಳನ್ನು ಎತ್ತಿ ತೋರಿಸುವ ಮೂಲಕ ಆ ಪಾತ್ರಗಳಿಗೆ ಪ್ರತ್ಯೇಕವಾದ ಸ್ಥಾನ–ಮಾನಗಳನ್ನು ನೀಡಿದ್ದಾರೆ.

ಎಸ್. ದಿವಾಕರ್‌ರವರು "ವಿಕಾಸವಾದ, ಮಾನವಶಾಸ್ತ್ರ, ಮನೋವಿಜ್ಞಾನ, ಮಾರ್ಕ್ಸ್‌ವಾದ ಹೀಗೆ ಅನೇಕ ಕ್ಷೇತ್ರಗಳ ವೈಚಾರಿಕ ಸಂಪತ್ತಿನಿಂದ ಸಮೃದ್ಧವಾದ ಅವರ ಸಂಭಾವ್ಯ, ಹಿಂಸೆ ಮತ್ತು ಸಾವುಗಳ ಅನಿವಾರ್ಯ ಬದುಕಿನಲ್ಲಿ ತಲೆಹಾಕುವ ಆಕಸ್ಮಿಕ ಹಾಗೂ ಸೋಲಿನ ಎದುರಿನಲ್ಲಿ ವಿರೋಧತ್ತವಾಗಿ ಸೆಣಸುವ ಮಾನವ ವ್ಯಕ್ತಿತ್ವದ ದೃಢೀಕರಣ ಇವುಗಳನ್ನು ಬುಡಮಟ್ಟು ವಿಶ್ಲೇಷಿಸುತ್ತಾರೆ". [೧]

ಈ ಸಂಕಲನದ ಪ್ರತಿಯೊಂದು ಕಥೆಯೂ ಮನಸ್ಸಿನ ಆಂತರ್ಯವನ್ನು ಬಿಚ್ಚಿ ತೋರಿಸುತ್ತವೆ. ಜೀವನ ಸಾಗುವ ಪಥದಲ್ಲಿ ಮಾನವನು ತನಗೆ ಎದುರಾಗುವ ಸಮಸ್ಯೆಗಳಿಗೆ ಪರಿಸ್ಥಿತಿಯ ಕೈಗೊಂಬೆಯಾಗಿ ಮಾಡಬಾರದ ಪಾಪಕೃತ್ಯಗಳಿಗೆ ಬಲಿಯಾಗಿ ಮನಸ್ಸಿನ ತೊಳಲಾಟಕ್ಕೆ ಸಿಕ್ಕಿಕೊಂಡಾಗ ಆ ತೊಳಲಾಟದಿಂದ ಹೊರ ಬರಲಾಗದೆ ತನ್ನ ಜೀವನದ ಅಂತ್ಯವನ್ನು ಕಾಣುತ್ತಾನೆ.

---

೧. ಕಥೆಯಾದಳು ಹುಡುಗಿ – ಯಶವಂತ ಚಿತ್ತಾಲ, ಪ್ರಿಸಮ್ ಬುಕ್ ಹೌಸ್, ಬೆಂಗಳೂರು. ೨೦೦೯, ಪುಟ ೯

ವ್ಯಕ್ತಿಯೂ ಬದುಕಿನತ್ತ ಸಾಗುತ್ತ ತನ್ನ ಆಸೆ, ಆಕಾಂಕ್ಷೆಗಳ ಈಡೇರಿಕೆಗೆ ತನ್ನ ತನವನ್ನು ಮರೆತು ಪ್ರಕೃತಿಯ ವಿರುದ್ಧ ಸಾಗುತ್ತಿರುವನು. ತನ್ನ ಬದುಕನ್ನು ನೆಲೆಗೊಳಿಸಲು ಹಾಗೂ ತನ್ನ ಕಾರ್ಯವನ್ನು ಈಡೇರಿಸಿಕೊಳ್ಳಲು ಮಾಡಬಾರದ ಕೃತ್ಯಗಳಿಗೆ ತಲೆ ನೀಡುತ್ತ ಜೀವನದ ಸ್ವಾದವನ್ನೇ ಮರೆತು ಅರ್ಥರಹಿತ ಜೀವನವನ್ನಾಗಿಸಿಕೊಳ್ಳುತ್ತಾನೆ. ಈ ಅರ್ಥರಹಿತ ಜೀವನವನ್ನು ಸ್ವಾದಯುತವಾಗಿ ಮಾಡಲು ಸಾಹಿತ್ಯ ಸಹಕಾರಿಯಾಗಿದೆ. ಹಾಗೂ ಅಂತಹ ಸಾಹಿತ್ಯ ಸಮಾಜಕ್ಕೆ ಬೇಕಾಗಿದೆ.

ಈ ಸಂಕಲನದ ಕಥೆಗಳು ಅದರಲ್ಲಿ ಬರುವ ಪಾತ್ರಗಳು, ಸಾಮಾಜಿಕ ಕಳಕಳಿಯನ್ನು ಆಕಸ್ಮಿಕ ಘಟನೆಗಳನ್ನು ಸಾವಿನ ಚಿತ್ರಣವನ್ನು ಬದುಕಿನ ಅನಿವಾರ್ಯತೆಯನ್ನು ಕಟ್ಟಿಕೊಡುವ ಕಥೆಗಳಾಗಿವೆ. ಲೇಖಕರು ಓದುಗರನ್ನು ಪ್ರತ್ಯಕ್ಷ ಸಾಕ್ಷಿಗರಂತೆ ನಿಂತು ಕಥೆಗಳನ್ನು ನಿರೂಪಿಸುತ್ತಾ ಹೋಗುತ್ತಾರೆ. ಹಾಗೂ ನಾವು ಆ ಕಥೆಗಳಲ್ಲಿನ ಪಾತ್ರಗಳಲ್ಲಿ ಒಂದಾಗಿದ್ದೇವೋ ಎನ್ನುವಂತೆ ಭಾಸವಾಗುವ ಅನುಭವ ಉಂಟಾಗುತ್ತದೆ. ಕಥೆಗಳನ್ನು ಪೂರ್ಣವಾಗಿ ಓದಿದ ಮೇಲೂ ಮನಸ್ಸಿನ ಮೇಲೆ ಉಳಿಯುವ ಆ ಪಾತ್ರಗಳು ನಮ್ಮನ್ನು ಅನೇಕ ಪ್ರಶ್ನೆಗಳಿಗೆ ಗುರಿ ಮಾಡುತ್ತವೆ. ನಿಜವಾಗಿ ಹೇಳಬೇಕೆಂದರೆ ಸಾಹಿತ್ಯದ ಶಕ್ತಿಯೇ ಅದು!

ಸಮಾಜವು (ಮನುಷ್ಯನು) ತನ್ನ ಉಳಿಯುವಿಕೆಗಾಗಿ ಯಾವುದೇ ನೈತಿಕತೆಯನ್ನು ಹೊಂದದೆ ಕೇವಲ ಸ್ವಾರ್ಥ ಜೀವನವನ್ನು ನಡೆಸುವಾಗ ಸಾಹಿತ್ಯವು ಇಂತಹ ಸಂದರ್ಭಗಳಲ್ಲಿ ತನ್ನ ತನವನ್ನು ತೋರಿಸಿದಾಗಲೇ ಸಾಹಿತ್ಯಕಾರನಿಗೂ ಸಾಹಿತ್ಯ ಸೃಷ್ಟಿಗೂ ಸಾರ್ಥಕ್ಯ ದೊರೆಯುವುದು. ಅಂತಹ ಅದ್ಭುತ ಕಾರ್ಯವನ್ನು ಚಿತ್ತಾಲರು ತಮ್ಮ ಬರವಣಿಗೆಯ ಮೂಲಕ ಮಾಡಿದ್ದಾರೆ.

ಚಿತ್ತಾಲರ ಬರವಣಿಗೆಯ ಉದ್ದೇಶವು ಬಹುಶಃ ಸಮಾಜವನ್ನು ತಿದ್ದುವ ಪರಿಯಾಗಿರಬಹುದು. ಮಾನವನ ತೊಳಲಾಟಗಳನ್ನು, ಸಂಕಷ್ಟಗಳನ್ನು, ದುಃಖ ದುಮ್ಮಾನಗಳನ್ನು ಮನಸ್ಸಿನ ಆಂತರ್ಯವನ್ನು, ಭಾವನೆಗಳನ್ನು, ಬದುಕಿನ ನೈಜ ಘಟನೆಗಳ ಮೇಲೆ ಚಿತ್ರಿಸಿದ್ದಾರೆ.

ಇವರ ಈ ರೀತಿಯ ಸಾಹಿತ್ಯ ಸೃಷ್ಟಿಗೆ ಬಹುಶಃ ಇವರ ಹುಟ್ಟೂರಾದ ಹನೇಹಳ್ಳಿ ಸುತ್ತಮುತ್ತಲಿನ ಪ್ರದೇಶದ ಪ್ರಭಾವ ಹಾಗೂ ಮುಂಬೈ ನಗರದಂತಹ ಜೀವನ ಶೈಲಿ ಅಲಿನ ಜನರ ಪರಿಸ್ಥಿತಿ, ರೀತಿ–ನೀತಿಗಳೇ ಕಾರಣವಾಗಿವೆ ಎನ್ನಬಹುದು.

ಒಬ್ಬ ನಿಜವಾದ ಸಾಹಿತಿಯ ಸಾಹಿತ್ಯಕ್ಕೆ ಹಾಗೂ ಅವನ ಬರವಣಿಗೆಗೆ ಬೆಲೆ ದೊರೆಯುವುದು, ಓದುಗನು ಅವನು ರಚಿಸಿದ ಸಾಹಿತ್ಯದಿಂದಲೋ, ಬರವಣಿಗೆಯಿಂದಲೋ ಪ್ರಭಾವಿತನಾಗಿ ತನ್ನ ಬದುಕಿನಲ್ಲಿ ಸಾಹಿತಿಯ ತಾತ್ಪರ್ಯವನ್ನೇ ಅಳವಡಿಸಿಕೊಂಡು ಜೀವನವನ್ನು ಸಾರ್ಥಕ್ಯದ ಕಡೆಗೆ ಕೊಂಡೊಯ್ದಾಗ ಮಾತ್ರ.

ಚಿತ್ತಾಲರೇ ಹೇಳುವಂತೆ "ನಾವು ವಿಚಾರ ಮಾಡುವ, ಭಾವಿಸುವ ಹಾಗೂ ನೋಡುವ ಮಟ್ಟಗಳು ಎತ್ತರಗೊಂಡು ನಾವು ಮಾನವರಾಗಿ ಅರಳುವ ಸಾಧ್ಯತೆಯೇ ಸಾಹಿತ್ಯ ಸಮಾಜಕ್ಕೆ ನೀಡುವ ದೊಡ್ಡ ಕೊಡುಗೆಯಾಗಿದೆಯೆಂದು ನಾನು ನಂಬುತ್ತೇನೆ–ಬದುಕಿನ ಬಗ್ಗೆ...." [೨]

---

೨. ಸಾಹಿತ್ಯ ಸೃಜನಶೀಲತೆ ಮತ್ತು ನಾನು – ಯಶವಂತ ಚಿತ್ತಾಲ, ಜ್ಯೋತಿಷ್ಮತಿ ಪ್ರಕಾಶನ, ಅಜ್ಜರ ಕಾಡು, ಉಡುಪಿ, ೧೯೮೩ ..

ಎಂದರೆ ಒಬ್ಬ ಸಾಹಿತಿಯ ಯೋಚನಾ ಲಹರಿ, ವಿಚಾರವಂತಿಕೆ, ಅವನ ಭಾವನೆಗಳು, ನೋಡುವ ದೃಷ್ಟಿಕೋನಗಳು ಎಲ್ಲವೂ ಮೊದಲು ಅವನನ್ನು ಸುಸಂಸ್ಕೃತ ವ್ಯಕ್ತಿಯನ್ನಾಗಿಸಿ ಅವನು ನೀಡುವ ಸಾಹಿತ್ಯಗಳೇ ಅವನು ಸಮಾಜಕ್ಕೆ ನೀಡುವ ಕೊಡುಗೆಗಳು.

ಸಾಹಿತ್ಯ ಕೃತಿಗಳು ವಸ್ತುನೋಟವು ಸಾಮಾನ್ಯವಾಗಿ ಮನುಷ್ಯನ ಮನಸ್ಸಿನಲ್ಲಿ ಮರೆಯಾಗಿ ಮಲಗಿರುವ ಅಂತರಾತ್ಮವನ್ನೋ ಅಥವಾ ಅಂತರಾಳವನ್ನೋ ಬಡಿದೆಬ್ಬಿಸಿ ಮಾನವನಲ್ಲಿರಬೇಕಾದಂತಹ ಸಾಮಾನ್ಯ ಮೌಲ್ಯಗಳನ್ನು ತಿಳಿಸುವ ಕಾರ್ಯಗಳನ್ನು ಮಾಡುತ್ತಿದೆ.

ಆಧುನಿಕ ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಿದ ಚಿತ್ತಾಲರ ಕಥೆಗಳು, ಕಾದಂಬರಿಗಳು ಹಾಗೂ ಬರವಣಿಗೆಗಳ ಮೂಲಕ ವಿಭಿನ್ನ ರೀತಿಯ ಪಾತ್ರಗಳನ್ನು ಸೃಷ್ಟಿಸಿ ಆ ಪಾತ್ರಗಳ ಮೂಲಕ ನಮ್ಮನ್ನು ನಾವು ಕಾಣುವ ಪ್ರಯತ್ನವನ್ನು ಹಾಗೂ ಆ ಪ್ರಯತ್ನದಿಂದಲೇ ಸಮಾಜವನ್ನು ತಿದ್ದುವ ಕೈಂಕರ್ಯವನ್ನು ಮಾಡಿದ್ದಾರೆ. ಈ ಕಾರ್ಯವು ಚಿತ್ತಾಲರಿಂದ ಮಾತ್ರ ನಡೆಯುತ್ತಿಲ್ಲ. ಒಬ್ಬ ನಿಜವಾದ ಸಾಹಿತಿಯೂ ಈ ಕಾರ್ಯದಲ್ಲಿ ಅವನನ್ನು ತೊಡಗಿಸಿಕೊಂಡಿರುತ್ತಾನೆ. ಕುವೆಂಪುರವರಿಂದ ಹಿಡಿದು (ಸಣ್ಣಕಥೆಗಳು – ಸಾಲದ ಮಗು) ಇಂದಿನ ಕವಿಗಳವರೆಗಿನ ಎಲ್ಲ ಕವಿಗಳು ತಮ್ಮ ಸಾಹಿತ್ಯದಿಂದ ಮನುಷ್ಯನ ಋಣಾತ್ಮಕ ಭಾವನೆಗಳನ್ನು ತಿದ್ದುತ್ತಲೇ ಬಂದಿದ್ದಾರೆ. ಕುವೆಂಪು, ಮಾಸ್ತಿ, ಬೇಂದ್ರೆ, ಕಾರಂತರು ಇವರೆಲ್ಲ ಸಾಹಿತಿಗಳು, ಕೃತಿಗಳ ಮೂಲಕ ಮನುಷ್ಯನು ತನ್ನನ್ನು ತಾನು ತಿದ್ದುಕೊಳ್ಳುವ ಒಂದು ಪ್ರಯತ್ನವನ್ನಾಗಿ ನೋಡಬಹುದು. ಇವರು ಸೃಷ್ಟಿಸಿರುವ ಪಾತ್ರಗಳಲ್ಲಿ, ಆ ಪಾತ್ರಗಳ ಮೂಲಕ ಆಗುವ ದುರಂತಗಳು ಅದರಿಂದ ಸಮಾಜಕ್ಕೆ ಹಾಗೂ ಸಮಾಜದಿಂದ ಅವರಿಗಾಗುವ ಅನಾಹುತಗಳ ಮೂಲಕ ಎಚ್ಚರಿಸುತ್ತಲೇ ಬಂದಿದ್ದಾರೆ.

ಸಾಹಿತ್ಯಾಸಕ್ತನು ತಾನು ಓದುವ ಕೃತಿಯ ಮೂಲಕ ತನಗೆ ಬೇಕಾದುದನ್ನೇ ಹುಡುಕುವ ಒಂದು ಪ್ರಯತ್ನ ಅಥವಾ ಆತ್ಮಾನುಭವಕ್ಕೆ ಅವನು ಕಂಡು ಕೊಂಡಿರುವ ದಾರಿಯಾಗಿದೆ ಎನ್ನಬಹುದು. ವ್ಯಕ್ತಿಯೂ ತನಗೆ ಬೇಕಾದುದ್ದನ್ನು ಹುಡುಕಾಡುವುದರಲ್ಲಿ ಸಾಹಿತ್ಯದ ವಸ್ತುವಿಷಯಗಳು ಒಂದು.

ಸಾಹಿತ್ಯ ಸೃಷ್ಟಿಯ ಕ್ರಿಯೆಯಲ್ಲಿ ಸಾಹಿತಿಯೂ ಅವನನ್ನು ಸೇರ್ಪಡಿಸಿಯೇ ಸಾಹಿತ್ಯ ರಚಿಸುತ್ತಾನೆ. ಅವನ ಭಾವನೆಗಳು, ಅನುಭವಗಳು, ನಡೆದ ಸಂಗತಿಗಳೆಲ್ಲವನ್ನು ಗಮನದಲ್ಲಿರಿಸಯೇ ಪದಗಳ ಮೂಲಕ ಅಭಿವ್ಯಕ್ತಿಗೊಳಿಸುತ್ತಾನೆ. ಸಾಹಿತ್ಯದ ಪ್ರಭಾವಕ್ಕೆ ಒಳಗಾದ ವ್ಯಕ್ತಿ ಮುಕ್ತ ಮನಸ್ಸಿನಿಂದಲೇ ಸಾಹಿತ್ಯವನ್ನು ಸೃಷ್ಟಿಸಿರುತ್ತಾನೆ. ಸಮಾಜದ ಪ್ರತಿಯೊಂದು ಮಜಲುಗಳನ್ನು, ಸೂಕ್ಷ್ಮವಾಗಿ ಗಮನಿಸಿಯೆ ಸಾಹಿತ್ಯಕ್ಕಿಳಿಯುತ್ತಾನೆ. ಈ ಮೂಲಕ ಇವನೊಬ್ಬ ಜೀವಂತ ಸೃಷ್ಟಿಶೀಲ ವ್ಯಕ್ತಿಯಾಗಿ ಸಮಾಜದ ಮುಂದೆ ನಿಲ್ಲುತ್ತಾನೆ. ಹಾಗೂ ಸಮಾಜದ ಏಳ್ಗೆಯ ಸೃಷ್ಟಿಕರ್ತನಾಗುತ್ತಾನೆ.

ಸಾಹಿತ್ಯದಲ್ಲಿ ಸಾಮಾಜಿಕ ಪ್ರಜ್ಞೆ, ಕಾಳಜಿ ಇರಬೇಕು. ಸಾಮಾಜಿಕ ಕಾಳಜಿ, ಇಲ್ಲದ ಸಾಹಿತ್ಯ ಗೊಡ್ಡದಾದುದೆಂದು ಅಥವಾ ಸಾರವಿಲ್ಲದೆಂದು ಪರಿಗಣಿಸಬಹುದು. ನಮ್ಮ

ಅನುಭವಗಳು ಪ್ರಜ್ಞೆಯಾಗಿ ಬೆಳಗಿದಾಗ ಪಡೆಯುವ ಆಕೃತಿ ಸಮಕಾಲೀನ ಸಮಾಜ ಮತ್ತು ಸಂಸ್ಕೃತಿಗಳು ಕೊಡುವ ಅನುಭವಗಳು ಹಾಗೂ ಮನ್ನಣೆಗಳನ್ನು ಅವಲಂಬಿಸಿಯೆ ಸಾಹಿತ್ಯ ರಚನೆಯಾಗಿರುತ್ತದೆ. ಹಾಗೇ ರಚನೆಯಾದಂತಹ ಸಾಹಿತ್ಯಗಳ್ಳೇ ಜನ ಮನ್ನಣೆಗಳಿಸಿ ಓದುಗರ ಮನಸ್ಸಿನಲ್ಲಿ ಕೂರುತ್ತದೆ. ಆದ್ದರಿಂದಲೇ ಸಮುದಾಯದಲ್ಲಿ ಸಾಹಿತಿಗಳ ಪಾತ್ರ ಬಹು ಮುಖ್ಯವಾಗಿದೆ.

ಸಾಹಿತ್ಯಗಳು ಮಾನವನ ಜೀವನದಲ್ಲಿ ಬಹು ದೊಡ್ಡ ಪಾತ್ರವಹಿಸುತ್ತವೆ. ಅವನ ಆಚಾರ-ವಿಚಾರಗಳು, ಭಾವನೆಗಳೆಲ್ಲವನ್ನು ಸಾಹಿತಿಯೂ ಬರವಣಿಗೆಯ ರೂಪಕ್ಕಿಳಿಸಿದಾಗ ಓದುಗನು ಓದಿ ಅವನ ಭಾವನೆಯಲ್ಲಿ ಬದಲಾವಣೆಗಳುಂಟಾಗುತ್ತವೆ. ಉತ್ತಮ ವಿಚಾರಗಳನ್ನು ತನ್ನಲ್ಲಳವಡಿಸಿಕೊಂಡಾಗ ಉತ್ತಮ ಸಮಾಜದ ರಚನೆಯಾಗಲು ಸಾಧ್ಯವಾಗುತ್ತದೆ. ವ್ಯಕ್ತಿಯ ಭಾವನೆಯಲ್ಲಿ ಯಾವಾಗ ಬದಲಾವಣೆ ಉಂಟಾಗುತ್ತದೆಯೊ ಉತ್ತಮ ಸಮಾಜದ ರಚನೆಯಲ್ಲಿ ಸಾಹಿತ್ಯದ ಪಾತ್ರ ಬಹುಮುಖ್ಯವಾಗುತ್ತದೆ. ಸಾಹಿತಿಗಳು ರಚಿಸುವ ಪಾತ್ರಗಳು ತಮ್ಮ ಅನುಭವದ ಹಾಗೂ ಕಲ್ಪನೆಯ ಜಾಡಿನ ಸೋಗಿನಲ್ಲಿ ಸೃಷ್ಟಿಯಾಗಿ ಭೂತ, ವರ್ತಮಾನ ಹಾಗೂ ಭವಿಷ್ಯದ ನೆಲೆಗಟ್ಟಿನಲ್ಲಿ ರಚನೆಯಾಗುತ್ತವೆ. ಸಾಹಿತಿಯು ತೋರಿಸುವ ಈ ಮೂರು ಕಾಲಗಳು ಅವನ ಜೀವನದ ಸಾರವನ್ನು ಸರಿಯಾದ ದಿಕ್ಕಿನಲ್ಲಿ ಕೊಂಡೊಯ್ಯುವಂತೆ ಪ್ರೇರೇಪಿಸುತ್ತವೆ.

ಮಾನವನು, ಅತೀವ ಬಯಕೆಗಳಿಂದ ಬಳಲಿ ಅವನ್ನು ಈಡೇರಿಸಿಕೊಳ್ಳುವಲ್ಲಿ ತನ್ನ ಮೌಲ್ಯಗಳನ್ನು ಮರೆತು ಸಮಾಜಕ್ಕೆ ಬೆನ್ನೆಲುಬಾಗಿ ನಿಲ್ಲುವ ಬದಲು ಸಮಾಜಕ್ಕೆ ಕಂಟಕಪ್ರಾಯವಾಗಿದ್ದಾನೆ. ನಮ್ಮ ದೇಶದ ಪ್ರಧಾನಿಯಾದಂತಹ ಶ್ರೀ ನರೇಂದ್ರಮೋದಿಗಳ ಘೋಷಣೆ ವಾಕ್ಯವಾದ "ಸ್ವಚ್ಛ ಭಾರತ ನಿರ್ಮಾಣ" – ಈ ಕಾರ್ಯವನ್ನು ಕೇವಲ ನಮ್ಮ ಸುತ್ತಮುತ್ತಲಿನ ಪರಿಸರದಲ್ಲಿ ಮಾತ್ರ ನಿರ್ಮಾಣ ಮಾಡಿದರೆ ಸಾಲದು. ಪ್ರತಿಯೊಬ್ಬ ಮಾನವನ ಹೃದಯದ ಅಂತರಾಳದಲ್ಲಿ ಸ್ವಚ್ಛತಾ ಕಾರ್ಯದ ಬೀಜವನ್ನು ನೆಟ್ಟರೆ ಅದುವೇ ಹೆಮ್ಮರವಾಗಿ ಬೆಳೆದು ಮಾನವನ ಭವಿಷ್ಯಕ್ಕೆ ಹಾಗು ಉತ್ತಮ ಸಮಾಜದ ನಿರ್ಮಾಣಕ್ಕೆ ಸಾಧ್ಯವಾಗುತ್ತದೆ. ಕೆಟ್ಟ ಆಲೋಚನೆಗಳಿಂದ ದುಷ್ಟ ವಿಚಾರಗಳ ಅಟ್ಟಹಾಸದಿಂದ ತುಂಬಿರುವ ಸಮಾಜವು ಉತ್ತಮ ಚಿಂತನೆಗಳ ಫಸಲನ್ನು ನೀಡಲು ಸಹಕಾರಿಯಾಗುತ್ತದೆ. ಈ ಫಸಲನ್ನು ಹೊಂದಬೇಕಾದರೆ ಸಾಹಿತಿಯೇ ಉತ್ತಮ ಸಾಹಿತ್ಯದ ಬೀಜವನ್ನು ಬರವಣಿಗೆಯ ಮೂಲಕ ಸಾಹಿತ್ಯಾಸಕ್ತನ ಹೃದಯದಲ್ಲಿ ನೆಡಬೇಕು.

ಈ ರೀತಿಯ ಕಾರ್ಯಗಳನ್ನು ಸಾಹಿತಿಯೂ ಮಾಡಬೇಕಾಗಿದೆ. ಸಾಹಿತಿಯ ಬರವಣಿಗೆಯಲ್ಲಿ ಒಂದು ಸುಂದರ ಸಮಾಜವನ್ನು ನಿರ್ಮಾಣ ಮಾಡುವ ಶಕ್ತಿ ಚೈತನ್ಯವಿದೆ. ಇವನು ಸಮಾಜವನ್ನು ತಿದ್ದುವ ರುವಾರಿಯಾಗಿದ್ದಾನೆ. ಹರಿಕಾರನಾಗಿದ್ದಾನೆ. ಸೃಷ್ಟಿಕರ್ತನಾಗಿದ್ದಾನೆ. ಇಂತಹವರ ಸಾಲಿಗೆ ಚಿತ್ತಾಲರು ಸೇರುತ್ತಾರೆ. ಆದ್ದರಿಂದಲೇ ಚಿತ್ತಾಲರನ್ನು ಸೃಜನಶೀಲ ಬರಹಗಾರರೆನ್ನುವುದು.

ಚಿತ್ತಾಲರು ದಶಕಗಳಿಂದಲೂ ಸಮಾಜವನ್ನು ಪಾತ್ರಗಳಿಂದ ತಿದ್ದುತ್ತಾ ಸಮುದಾಯದ ಏಳ್ಗೆಗಾಗಿ ಪರೋಕ್ಷವಾಗಿ ಸಹಾಯ ಮಾಡುತ್ತಲೇ ಬಂದಿದ್ದಾರೆ. ಇವರ ಅನೇಕ ಕೃತಿಗಳಲ್ಲಿ ಸಾಮಾಜಿಕ ಪ್ರಜ್ಞೆಯನ್ನು ಹೊಂದಿರುವ ವಸ್ತುಗಳೇ ಹೆಚ್ಚು. ಆದ್ದರಿಂದಲೇ ಇಂದಿಗೂ

ನಮ್ಮ ಕನ್ನಡ ಸಾಹಿತ್ಯದಲ್ಲಿ ತಮ್ಮದೇ ಆದ ಛಾಪನ್ನು ಮೂಡಿಸಿಕೊಂಡು ಬಂದಿರುವ ಸಾಹಿತಿಗಳಾಗಿದ್ದಾರೆ.

ವ್ಯಕ್ತಿಗಳಲ್ಲಿ ನಡೆಯುವ ಕೆಲವು ನೈಜ ಘಟನೆಗಳು ಕೆಲವೊಮ್ಮೆ ಕಥೆಗಳಾಗಿ ರೂಪುಗೊಳ್ಳುತ್ತವೆ. ಅವುಗಳೇ ಕೆಲವೊಮ್ಮೆ ಮಾನವನ ಮೇಲೆ ವ್ಯತಿರಿಕ್ತ ಪರಿಣಾಮಗಳುಂಟಾಗುತ್ತವೆ. ಇಂತಹವುಗಳನ್ನೇ ಕೆಲವೊಮ್ಮೆ ಸಾಹಿತಿಗಳು ಕಥಾವಸ್ತುಗಳನ್ನನಾಗಿ ಆಯ್ದುಕೊಳ್ಳುತ್ತಾರೆ. ಆಯ್ದುಕೊಳ್ಳುವ ಉದ್ದೇಶವೂ ಇಷ್ಟೇ. ಸಮಕಾಲೀನ ಬದುಕು ಎಷ್ಟೇ ಕ್ರೂರವಾಗಿದ್ದರು ಅದನ್ನು ಬದಲಿಸಲು ಸಾಧ್ಯವಾಗಬೇಕು ಎಂಬ ನೆಲೆಯಲ್ಲಿ ಬರೆಯುತ್ತಾರೆ. ಆ ನಿಟ್ಟಿನಲ್ಲಿ ಸಾಹಿತ್ಯ ಕಾರ್ಯ ಮಾಡುತ್ತಾರೆ.

# ೩. ವ್ಯಾಪ್ತಿ

"ಕಥೆಯಾದಳು ಹುಡುಗಿ" ಸಂಕಲನವು ಚಿತ್ತಾಲರ ಕಥೆಗಳಲ್ಲಿ ಬಹುಮೆಚ್ಚಿಗೆ ಪಡೆದ ಕಥಾ ಸಂಕಲವಾಗಿದೆ. ಇದರಲ್ಲಿನ ಎಂಟು ಕಥೆಗಳಲ್ಲಿ ಕಂಡು ಬರುವ ಪ್ರತಿಯೊಂದು ಪಾತ್ರಗಳು ಮನುಷ್ಯನ ಸಹಜ ಭಾವನೆಗಳಿಗೆ ಬೆಲೆ ತರುವಂತಹವುಗಳಾಗಿವೆ.

'ಸಮಾಜವು ಸಾಮಾಜಿಕ ಸಂಬಂಧಗಳ ಬಲೆ' ಎನ್ನುವಂತೆ ಮನುಷ್ಯನು ಬಂಧನಗಳಿಂದ, ಭಾವನೆಗಳಿಂದ ಬಂಧಿತನಾಗಿ, ಜೀವನವನ್ನು ಅನಾದಿಕಾಲದಿಂದಲೂ ಇಂದಿನವರೆಗೂ ಸಾಗಿಸುತ್ತಲೇ ಬಂದಿದ್ದಾನೆ.

ಮಾನವ ವೈಜ್ಞಾನಿಕತೆಯಲ್ಲಿ ಎಷ್ಟೇ ಮುಂದುವರೆದಿದ್ದರೂ, ಚಂದ್ರಮಂಡಲಕ್ಕೆ ಕಾಲಿಟ್ಟರೂ ಮಾನವನ ಅಂತರಾಳವನ್ನು ಕಂಡು ಹಿಡಿಯುವಲ್ಲಿ ವಿಫಲನಾಗಿದ್ದಾನೆ. ಅವನ ಜೀವನದಲ್ಲಿ ನಡೆಯುವ ಅನೇಕ ಘಟನೆಗಳು, ಪರಿಸ್ಥಿತಗಳು, ಕಾಲಗತಿಯ ಮಿತಿಯಲ್ಲಿ ಗಮನಿಸಲು ಅವಕಾಶವಿಯದೇ ಕಾಲದ ಜೊತೆ ನಾವು ಸಾಗುತ್ತ ಜೀವನ ಮೌಲ್ಯಗಳಿಲ್ಲದೆ ಬದುಕನ್ನು ಸಾಗಿಸುತ್ತಿದ್ದೇವೆ. ಕೆಲವೊಮ್ಮೆ ನಾವು ಇರುವ ಪರಿಸ್ಥಿತಿಯೂ ಸಹ ನಮಗರಿವಿಲ್ಲದೆಯೇ ಕಾಲದ ಪರಿಧಿಯಲ್ಲಿ ಸಾಗುತ್ತಿದ್ದೇವೆ.

ಮನುಷ್ಯನು ಎಷ್ಟೇ ಸಾಧನೆಗೈದರು ತನ್ನ ಮನಸ್ಸಿನ ಆಸೆಗಳ ಪೂರೈಕೆಗೆ ದಾರಿಯನ್ನು ಹುಡುಕುತ್ತ ಆ ಆಸೆಗಳಿಗೆ ಬೆಲೆ ನೀಡುತ್ತ, ಅದನ್ನು ನಿಗ್ರಹಿಸದೆ ಇಂದು ತಾನು ಕಂಡುಕೊಂಡು ಯಶಸ್ವಿಯಾಗಿರುವ ಹಲವಾರು ಕ್ಷೇತ್ರಗಳಲ್ಲಿ ಸಾಧನೆ ಮಾಡಿದ್ದರೂ, ಮನುಷ್ಯನ ಆಂತರ್ಯದ ಆಸೆ – ಅಭಿಲಾಷೆಗಳನ್ನೇ ಗೆಲ್ಲಲು ಸಾಧ್ಯವಾಗದೇ ದುಃಖದಿಂದಲೇ ಬಳಲುತ್ತಿದ್ದಾನೆ. ಮಾನವ ಬದುಕು, ಭಾವನೆಯ ಪ್ರಪಂಚದಲ್ಲಿ ಮಿಂದು ಎದ್ದು ಬೀಸುವ ಬಿರುಗಾಳಿಗೆ ಮಾನವತವಾದದ ನೆಲೆಗಟ್ಟಾಗಲಿ, ಚೌಕಟ್ಟಾಗಲಿ ಸಾಲದಾಗುತ್ತದೆ.

ಮಾನವ ಜೀವನ ಬಹುಪಾಲು ಭಾವನಾ ಪ್ರಪಂಚದಲ್ಲೇ ಪ್ರಯಾಣಿಸುತ್ತಿರುತ್ತಾನೆ. ಯಾವಾಗ ಅವನ ಭಾವನೆಗಳು ಈಡೇರುವುದಿಲ್ಲವೋ ಆಗ ಮನಸ್ಸಿನ ಜಂಜಾಟಕ್ಕೆ ಒಳಗಾಗಿ, ಮಾನಸಿಕ ಸ್ಥಿಮಿತತೆಯನ್ನು ಕಳೆದುಕೊಂಡು ಸಮಾಜದ ಶಿಥಿಲತೆಗೆ ಕಾರಣನಾಗುತ್ತಾನೆ. ಅದರಿಂದ ತನ್ನ ನೆಮ್ಮದಿಯನ್ನು ಹಾಗೂ ಸಮಾಜದ ನೆಮ್ಮದಿಯನ್ನು ಹಾಳುಮಾಡಿಕೊಂಡು ಅದರ ದುಃಸ್ಥಿತಿಗೆ ಕಾರಣನಾಗುತ್ತಾನೆ.

ಇಂತಹ ವಸ್ತುಗಳನ್ನಿಟ್ಟುಕೊಂಡು ರಚಿತವಾದ ಸಂಕಲನವೇ ಯಶವಂತ ಚಿತ್ತಾಲರ "ಕಥೆಯಾದಳು ಹುಡುಗಿ".

ಚಿತ್ತಾಲರ ಈ ಸಂಕಲನದಲ್ಲಿ ವ್ಯಕ್ತಿಯೂ ತಾನು ಬದುಕುವ ಭವಣೆಯಲ್ಲಿ ಸಂಬಂಧಗಳನ್ನು ಲೆಕ್ಕಿಸದೆ ತಾನು ಹೋಗುತ್ತಿರುವ ದಾರಿಯು ಸರಿಯಾದದ್ದೋ, ಇಲ್ಲವೋ ಎನ್ನುವ ಭ್ರಮೆಯು ಇರದೆ ಆಸೆಯ ಬಿರುಗಾಳಿಯ ಗೋಪುರಕ್ಕೆ ಸಿಲುಕಿ, ಕೊನೆಗೆ ಗುರಿಕಾಣದೆ ದಿಕ್ಕು ತಪ್ಪಿ ಎತ್ತಲೋ ಸಾಗುವಂತೆ ತನ್ನ ಜೀವನವನ್ನು ನಡೆಸುತ್ತಿದ್ದಾನೆ.

ಈ ಸಂಕಲನದಲ್ಲಿ ಪ್ರತಿಯೊಂದು ಕಥೆಯಲ್ಲು ಒಂದಲ್ಲ ಒಂದು ಸಂದೇಶವನ್ನು ಹೊಂದಿದೆ. ಎಂಟು ಕಥೆಗಳಲ್ಲಿನ ಪಾತ್ರಗಳು ಒಂದು ರೀತಿಯ ಸಂದೇಶವನ್ನು ಓದುಗರಿಗೆ ನೀಡುತ್ತಿವೆ. ಇಲ್ಲಿನ ಪಾತ್ರಗಳು ವ್ಯಕ್ತಿಗತವಾಗಿದ್ದರೂ ಮಾನವನೊಬ್ಬನು ತನ್ನಲ್ಲಿರಬೇಕಾದ ನೈತಿಕ ಪ್ರಜ್ಞೆಗಳು ಹಾಗು ಮನಸ್ಸಿನ ಸ್ಥಿಮಿತತೆ ಇರದಿದ್ದರೆ ಜೀವನದಲ್ಲಾಗುವ ಬದಲಾವಣೆಗಳಿಗೆ ವಿಕೋಪಕ್ಕೆ ಅವನು ಜವಾಬ್ದಾರನಾಗುತ್ತಾನೆ. ಸಮಾಜದ ಮೌಲ್ಯಗಳನ್ನು ಕಂಡುಕೊಳ್ಳುವಲ್ಲಿ ಈ ಸಂಕಲನವು ಸಹಾಯವಾಗುತ್ತದೆ.

ಚಿತ್ತಾಲರ ಕಥೆಗಳಲ್ಲಿ ಕಥೆಯ ವಸ್ತು ಬಹುಮುಖ್ಯವಾಗಿರುತ್ತದೆ. ಹಾಗೂ ಅವುಗಳನ್ನು ಪಾತ್ರಗಳ ಮೂಲಕ ವಸ್ತುವನ್ನು ಬಿಡಿಸುತ್ತಾ ಹೋಗುತ್ತಾರೆ. ಕಥೆಯಲ್ಲಿನ ಪಾತ್ರದ ನಾಯಕ ಹಾಗು ನಾಯಕಿಗೆ ಸ್ಥಾನವನ್ನು ಕೊಡುತ್ತಾ ಆ ಪಾತ್ರದ ಮೂಲಕ ಕಥೆಯ ವಸ್ತುವನ್ನು ವಿಶ್ಲೇಷಿಸುತ್ತಾ ಅವನ ವಿದ್ಯಮಾನಗಳಿಂದ, ಬಯಕೆಗಳಿಂದ ಮನಸ್ಸಿನ ಅಸ್ಥಿಮಿತೆಯಿಂದ ಅವರು ದುರಂತ ಕಥೆಗಳ ನಾಯಕ ನಾಯಕಿಗಳಾಗುತ್ತಾರೆ. ಮಾನವನ ಅಸ್ಥಿರತೆ, ಅಮಿತ ಬಯಕೆಗಳೆ ಅವನನ್ನು ಗುರಿಯಿಲ್ಲದ ಜೀವನವನ್ನಾಗಿಸಿವೆ ಎಂಬುದನ್ನು ಪಾತ್ರಗಳು ತಿಳಿಸುತ್ತವೆ.

ಚಿತ್ತಾಲರು ಸಾಹಿತ್ಯವನ್ನು ರಚಿಸುತ್ತಾ ಮಾನವನ ಅಂತರ್ಮುಖವನ್ನು ಕೆಲವು ಕಥೆಗಳ ಮೂಲಕ ಪರಿಚಯಿಸಿ ಕೊಟ್ಟಿದ್ದಾರೆ. ವ್ಯಕ್ತಿಯ ಬಾಹ್ಯ ಪ್ರಪಂಚದಲ್ಲಿ ಎಲ್ಲರೊಂದಿಗೆ ಬೆರೆತರು ಆಂತರ್ಯದಲ್ಲಿ ತನ್ನದೇ ಆದಂತಹ ಒಂದು ಪ್ರಪಂಚವನ್ನು ಸೃಷ್ಟಿಸಿಕೊಂಡು ಬಯಕೆಗಳನ್ನು ಈಡೇರಿಸಿಕೊಳ್ಳುವಲ್ಲಿ ತನ್ನತನವನ್ನು ಕಂಡುಕೊಳ್ಳುತ್ತಾನೆ, ಸಾಗುತ್ತಾನೆ.

ಈ ಕಥೆಯ ಸಂಕಲನಗಳಲ್ಲಿ ಕಂಡು ಬರುವ ಮತ್ತೊಂದು ವಿಶೇಷತೆಗಳೆಂದರೆ ಕಥೆಗಳಲ್ಲಿ ಕಂಡು ಬರುವ ವಸ್ತುಗಳು, ವ್ಯಕ್ತಿಗಳು, ಪ್ರದೇಶಗಳು, ಭಾಷೆಗಳು ಹಾಗೂ ಮನಸ್ಸಿನ ಭಾವನೆಗಳು ಇತ್ಯಾದಿ ವಿಷಯಗಳೆಲ್ಲವೂ ಅವರ ಕಥೆಗಳನ್ನು ರಚಿಸಲು ಪ್ರೇರಕ ವಸ್ತುಗಳಾಗಿವೆ.

ಸಂಕಲನದ ಮೊದಲ ಭಾಗವಾದ **"ಕಥೆಯಲ್ಲಿ ಬಂದಾತ ಮನೆಗೂ ಬಂದು ಕದ ತಟ್ಟಿದ"** ಕಥೆಯಲ್ಲಿ ವ್ಯಕ್ತಿಯೊಬ್ಬ ಸಮಾಜದಲ್ಲಿ ನಡೆಯುವ ಅನ್ಯಾಯ, ಅಕ್ರಮ, ದೌರ್ಜನ್ಯಗಳಿಗೆ ಸಿಡಿದೆದ್ದಾಗ ಅದರಿಂದಾಗುವ ಅವನತಿಯನ್ನು ಕಾಣಬಹುದು. ಈ ಕಥೆಯಲ್ಲಿ ಬರುವ ವ್ಯಕ್ತಿಯ ಹೆಸರು ವೋಮು. ಅಪರಿಚಿತ ವ್ಯಕ್ತಿಯಂತೆ ಲೇಖಕರಿಗೆ ಪರಿಚಿತನಾಗಿ, ತಾನು ಬಂದ ಉದ್ದೇಶವನ್ನು ಲಕೋಟೆಯಲ್ಲಿ ತಿಳಿಸಿರುತ್ತಾನೆ. ಲೇಖಕರು ವೋಮು ಕೊಟ್ಟ ಲಕೋಟೆಯನ್ನು ಆ ಕ್ಷಣವೇ ಓದಿದ್ದರೆ ಇದೊಂದು ದುರಂತ ಕಥೆಯಾಗಿರುತ್ತಿರಲಿಲ್ಲ. ಲೇಖಕರ ಅಹಂನಿಂದಲೋ ಎನ್ನುವಂತೆ ಅದನ್ನು ಓದದೆ ಇದ್ದದ್ದು ಈ ಕಥೆ ಸಶೇಷವಾಗಿ ಉಳಿದಿದೆ.

ವೋಮು ತನ್ನ ಜೋಪಡಿ ಜನರ ನ್ಯಾಯಕ್ಕಾಗಿ ಹೋರಾಡಿ, ಕೊನೆಗೆ ರಾಜಕಾರಿಣಿಯೊಬ್ಬರ ಸಂಚಿಗೆ ಬಲಿಯಾಗುವುದೇ ಈ ಕಥೆಯ ಸಾರವಾಗಿದೆ.

ಈ ಕಥೆಯು ನಮ್ಮ ಪ್ರಸ್ತುತ ಸಮಾಜದ ರಾಜಕೀಯ ವ್ಯವಸ್ಥೆಯನ್ನು ಸಾಮಾನ್ಯ ಜನರ ಮನಃಸ್ಥಿತಿಯನ್ನು ಕಟ್ಟಿಕೊಟ್ಟಿದೆ. ಮನುಷ್ಯನಾದವನು ಸಮಾಜದ ಹಿತವನ್ನು ಬಯಸದೆ ಸ್ವಾರ್ಥ ಜೀವನವನ್ನು ಬಯಸುತ್ತಿದ್ದಾನೆಂಬುದೆ ಕಥೆಯ ತಿರುಳು.

ಮಾನವನು ಪ್ರಾಣಿಗಳಿಗಿಂತ ಬೇರೆ ಎಂದು ಗುರುತಿಸಿಕೊಳ್ಳವುದೇ ಅವನ ಯೋಚನಾ ಲಹರಿ ಹಾಗೂ ನಾಗರೀಕತೆಯಿಂದ. ಇವೆರಡನ್ನು ಮರೆತು ಪ್ರಾಣಿಯಂತೆ ವರ್ತಿಸುವ ಅವನ ಕಾಮುಕ ದೌರ್ಜನ್ಯಕ್ಕೆ ಬಲಿಯಾಗುವ ಅದೇಷ್ಟೋ ಹೆಣ್ಣು ಮಕ್ಕಳು (ಅಪ್ರಾಪ್ತವಯಸ್ಸಿನ ಬಾಲೆಯರು) ಇಂದಿಗೂ ತಮ್ಮ ಸ್ಥಾನವನ್ನು ಉಳಿಸಿಕೊಳ್ಳುವಲ್ಲಿ ವಿಫಲರಾಗಿದ್ದಾರೆ. ಅಂತಹ ಕಥಾ ಹಂದರವೆ **'ಕಥೆಯಾದಳು ಹುಡುಗಿ'**.

ಈ ಕಥೆಯಲ್ಲಿ ಹದಿಮೂರು ವರುಷದ ಜಾನಕಿ, ರಕ್ತದ ಕ್ಯಾನ್ಸರ್‌ನಿಂದ ಬಳಲುತ್ತಿದ್ದು, ಅವಳ ಮೇಲೆ ಖನಿಗಳ ಒಡೆಯರ ಮಕ್ಕಳು ಅತ್ಯಾಚಾರವೆಸಗಿರುತ್ತಾರೆ. ಈ ಹಿನ್ನಲೆಯಲ್ಲಿ ರಚಿಸಿದ ಕಥೆ ಇದು.

'ಅತ್ಯಾಚಾರ'ವೆನ್ನುವುದು ನಮ್ಮ ದುರಂತ ಸಮಾಜದ ಪಿಡುಗೇ ಸರಿ. ಅತ್ಯಾಚಾರಗಳು ಪ್ರತಿದಿನ, ಇಂದಿಗೂ ನಡೆಯುತ್ತಲೇ ಇವೆ. ಇವುಗಳಿಗೆ ಎಷ್ಟೇ ಕಡಿವಾಣ ಹಾಕಿದರೂ ಇದೊಂದು ನಿಲ್ಲದ ಪ್ರಕ್ರಿಯೆಯಾಗಿದೆ. ದುರಂತವೆಂದರೆ ಅಪ್ರಾಪ್ತವಯಸ್ಸಿನ ಬಾಲಕಿಯರ ಮೇಲೆ ಈ ಅತ್ಯಚಾರವೂ ನಡೆಯುತ್ತಲೇ ಇದೆ. ಇದು ಇಂದಿನ ಸಮಾಜಕ್ಕೆ ಸಂದೇಶವನ್ನು ನೀಡುತ್ತಾ ಸಮಾಜದ ಹಾದಿಯನ್ನು ಬದಲಿಸಲು ಈ ಮೂಲಕ ಪ್ರಯತ್ನಿಸುತ್ತಿದೆ. ಇದೊಂದು ಸಾಮಾಜಿಕ ಮಹತ್ವವುಳ್ಳ ಕಥೆಯೆಂಬುದನ್ನು ಕಥೆಯ ಮೂಲಕ ಸ್ಪಷ್ಟವಾಗಿ ತಿಳಿಯಬಹುದು.

**"ತ್ರಯೋದಶ ಪುರಾಣ"** ದ ಕಥೆಯ ದುರಂತ ನಾಯಕ ಗಣೇಶ. ಭಾಷೆಯ ಅವಘಡದಿಂದಲೇ ತನ್ನ ತಂದೆ-ತಾಯಿಯನ್ನು ಹಾಗೂ ಹೋಟೆಲ್‌ನ್ನು ಕಳೆದುಕೊಂಡು ಮುಂಬೈಗೆ ಓಡಿ ಬಂದು ಹೋಟೆಲ್‌ನಲ್ಲಿ ಮಾಣಿಯೊಂದರೆ ಕೆಲಸಕ್ಕೆ ಸೇರಿದ. ಗೋಪಾಲ ಆ ಹೋಟೆಲಿನ ಇನ್ನೊಬ್ಬ ಮಾಣಿ. ಇವನಾಡಿದ ಜಾತಿಯ ಮಾತಿಗೆ ಮನನೊಂದ ಗಣೇಶ, ಅವನನ್ನು ಬೇರೊಂದು ವೃತ್ತಿ ಕೈಗೊಳ್ಳಲು ಪ್ರೇರೇಪಿಸುತ್ತದೆ. ಅದಕ್ಕೆ ಸರಿಗಟ್ಟುವಂತೆ ಅವನು ಭೇಟಿಯಾಗುವ ಆಕಸ್ಮಿಕ ವ್ಯಕ್ತಿಗಳು, ಆ ಆಕಸ್ಮಿಕ ವ್ಯಕ್ತಿಗಳೇ ಅವನನ್ನು ದುರಂತಕ್ಕೀಡು ಮಾಡುವ ಸಂಭವಗಳು ಹಾಗೂ ೧೩ನೇ ಸಂಖ್ಯೆಯು ಪ್ರಾರಂಭದಿಂದಲೂ ಕೆಟ್ಟದರ ಸಂಕೇತವನ್ನು ಸೂಚಿಸುವ ಈ ಕಥೆಯು 'ಹದಿಮೂರ'ರ ಸಂಖ್ಯೆಯು ಸುತ್ತ ಹೆಣೆದಿರುವ ಕಥೆಯಾಗಿದೆ.

ಜಾತಿ ವ್ಯವಸ್ಥೆಯ ಕಲ್ಪನೆಯೇ ಇರದ ಹದಿಮೂರು ವರುಷದ ಬಾಲಕನಿಗೆ, ಆ ಜಾತಿಯ ಮಾತುಗಳೇ ಅವನನ್ನು ದುರಂತಕ್ಕಿಡು ಮಾಡುತ್ತವೆ. ಇಂದಿಗೂ ನಮ್ಮ ಸಮುದಾಯವು ಜಾತಿಯ ಬೆನ್ನಲ್ಲೇ ಅಂಟಿಕೊಂಡು ಬಾಳುತ್ತಿದೆ. ಈ ರೀತಿಯ ಕಥಾ

ವಸ್ತುಗಳನ್ನು ಕಾದಂಬರಿಗಳಲ್ಲಿ, ಕಥೆಗಳಲ್ಲಿ ಹಾಗೂ ವ್ಯಕ್ತಿಯ ಅವನತಿಯನ್ನು ಚಿತ್ರಿಸಿದರು, ಇನ್ನು ಜಾತಿ ವ್ಯವಸ್ಥೆಯ ಸೋಗಿನಲ್ಲೇ ನಮ್ಮ ಸಮಾಜದ ಜನ ಅಂಟಿಕೊಂಡಿದ್ದಾರೆ, ಬಾಳುತ್ತಿದ್ದಾರೆ.

**'ಅಶ್ವತ್ಥಾಮ'** – ನಾಯಕ ರಾಮಚಂದ್ರ, ಕಥೆಗಳನ್ನು ಬರೆಯುತ್ತಿದ್ದೇನೆಂದು ಕೊಂಡು ಅವನೇ ಬರೆದಿದ್ದ ಕಥೆಯಲ್ಲಿ ಅವನಿಗೊಂದು ಆಘಾತ ಕಾದಿತ್ತು. ಅವನಿಗರಿವಿಲ್ಲದಂತೆಯೇ ತನ್ನ ಜೀವನದಲ್ಲಿ ನಡೆದುಹೋದಂತಹ ಘಟನೆಯನ್ನು ಬಿಡಿಬಿಡಿಯಾಗಿ ಬರೆದಿರುತ್ತಾನೆ. ಇದು ಅವನ ಗಮನಕ್ಕೆ ಬರುವುದು ಅವನ ಮನೆಗೆಲಸದವ ವಾಸುವಿಗೆ, ಬರೆದ ಕಥೆಯನ್ನು ಹೇಳಲು ಪ್ರಾರಂಭಿಸಿದಾಗ.

ಇಲ್ಲಿ ಸಾಹಿತಿಯೊಬ್ಬನು ತನ್ನ ಸುಪ್ತ ಪ್ರಜ್ಞೆಯಲ್ಲಿ ಅಡಗಿರುವ ವಿಚಾರಗಳ ಘಟನೆ ಕೆಲವೊಮ್ಮೆ ಅರಿವಿಗೆ ಬಾರದೆಯೆ ಬರವಣಿಗೆಯ ಮೂಲಕ ಬಿಚ್ಚಿಡುತ್ತಾನೆ. ಇದು ಮಾನವನ ಆಂತರ್ಯವನ್ನು ಹೊಕ್ಕ ವಿಚಾರವಾಗಿದ್ದು, ಮನೋವಿಕಾಸದ ಮೇಲೆ ರಚಿತವಾದಂತಹ ಕಥೆಯಾಗಿದೆ. ಕೆಲವು ವೇಳೆ ಮನುಷ್ಯನು ತನ್ನ ನೋವನ್ನು ಬೇರೆಯವರ ಬಳಿ ಹೇಳಿಕೊಳ್ಳಲಾಗದ ಸಂದರ್ಭದಲ್ಲಿ, ಅವನ ಪಾಪಪ್ರಜ್ಞೆಯು ಅವನನ್ನು ಕಾಡುತ್ತಲೇ ಇದ್ದಾಗ, ಅದಕ್ಕೆ ಅವನು ಕಂಡುಕೊಂಡತಹ ಮಾರ್ಗವಿರಬಹುದು. ಈ ಮೂಲಕವಾದರೂ ಅವನ ಮನಸ್ಸಿನ ಒತ್ತಡವನ್ನು ಕಡಿಮೆಮಾಡಿಕೊಳ್ಳುವ, ತನ್ನನ್ನು ತಾನು ಸರಿಪಡಿಸಿಕೊಳ್ಳುವ ಒಂದು ಪ್ರಯತ್ನವಾಗಿರಬಹುದು.

**"ಮುಖಾಮುಖಿ"** ಲೇಖಕರ ಜೀವನದಲ್ಲಿ ಹನೇಹಳ್ಳಿಯ ಪಾತ್ರ ಹಾಗೂ ಅಲ್ಲಿನ ವ್ಯಕ್ತಿಗಳು ಅದರಲ್ಲಿ ಇಂದಿರಕ್ಕ ಕೊಡ ಒಬ್ಬರು. ಲೇಖಕರು ಬಾಲ್ಯದಲ್ಲಿ ಇಂದಿರಕ್ಕನೊಂದಿಗೆ ಹೊಂದಿದ್ದ ಒಡನಾಟವು, ಹಲವು ವರ್ಷಗಳ ನಂತರ ದಿಢೀರನೇ ಒಂದು ದಿನ ಇಂದಿರಕ್ಕ ಲೇಖಕರ ಮನೆಗೆ ಬಂದಾಗ ಎದುರಾಗುವ ಮುಖಾಮುಖಿಯ ಸಂದರ್ಭ, ಇಂದಿರಕ್ಕನ ಈ ಪರಿಸ್ಥಿತಿಗೆ ತಾನು ಮಾಡಿದ ತಪ್ಪಿನ ಕಾರ್ಯವೇ ಕಾರಣವೆಂದು ಲೇಖಕರು ತಿಳಿಯುವುದು. ಹಾಗೂ ಇದರಿಂದ ಲೇಖಕರು ನೊಂದುಕೊಳ್ಳುವ ಪಾಪಪ್ರಜ್ಞೆ, ಈ ಪಾಪಪ್ರಜ್ಞೆಯು ಎಚ್ಚೆತ್ತುಕೊಳ್ಳುವಷ್ಟರಲ್ಲಿ ನಡೆಯ ಬಾರದದೆಲ್ಲ ನಡೆದು ಹೋಗಿರುತ್ತದೆ. 'ಮಿಂಚಿ ಹೋದ ಕಾಲಕ್ಕೆ ಚಿಂತಿಸಿ ಫಲವಿಲ್ಲ' ಎನ್ನುವಂತೆ, ಮಾಡಿದ ಪಾಪ ಕೃತ್ಯಕ್ಕೆ ಇಂದಿರಕ್ಕನ ಜೀವನ ದುರಂತಕ್ಕೀಡಾಯಿತು ಎಂದು ಲೇಖಕರು ಚಿಂತಿಸುವುದೇ ಈ ಕಥೆಯ ತಿರುಳು.

**'ಮುಖಾಮುಖಿ'** ಹಾಗೂ **'ಅಶ್ವತ್ಥಾಮ'**ದ ಎರಡೂ ಕಥೆಗಳು ಸಾಮಾನ್ಯವಾಗಿ ಕಂಡು ಬರುವ ವಿಚಾರವೆಂದರೆ ಅವರನ್ನು ಕಾಡುತ್ತಿದ್ದ ಪಾಪ ಪ್ರಜ್ಞೆಗಳು. ಅಶ್ವತ್ಥಾಮದಲ್ಲಿ ಸಾಹಿತಿಯೊಬ್ಬನು ತನ್ನ ಅಂತರಾಳದಲ್ಲಿ ಅಡಗಿ ಕುಳಿತ್ತಿದ್ದ ಪಾಪಪ್ರಜ್ಞೆಯನ್ನು ಅವನು ಕಥೆಯ ಮೂಲಕ ಹೊರಹಾಕಿ ತನ್ನ ದುಗುಡವನ್ನೇ ಕಡಿಮೆ ಮಾಡಿಕೊಳ್ಳುವ ಪ್ರಯತ್ನವಾದರೆ ಮುಖಾಮುಖಿಯಲ್ಲಿ ಲೇಖಕರು ಹನೇಹಳ್ಳಿಯ ಇಂದಿರಕ್ಕನಿಗೆ ಮಾಡಿದ ಮೋಸದಿಂದ ಹಾಗೂ ಇಂದಿರಕ್ಕನ ಮುಖಾಂತರವೇ ತನಗರಿವಿಗೆ ಬಂದ ಸತ್ಯದಿಂದ ನೊಂದ ಲೇಖಕರು ಮುಖಾಮುಖಿಯ ಕಥೆಯ ಮೂಲಕ ಪ್ರಾಯಶ್ಚಿತ್ತ ಮಾಡಿಕೊಳ್ಳುವ ಪರಿ. ಎರಡೂ ಕಥೆಗಳಲ್ಲೂ ಸಾಮ್ಯತೆಯನ್ನು ಗಮನಿಸಿದರೆ ಇಬ್ಬರು ಸಾಹತಿಗಳಲ್ಲಿ ಕಾಡುತ್ತಿದ್ದ ಪಾಪಪ್ರಜ್ಞೆಗಳು.

**"ಚಕ್ರವ್ಯೂಹ"** ಎನ್ನುವಂತಹದ್ದು ಮಹಾಭಾರತದ ಯುದ್ಧದಲ್ಲಿ ಅಭಿಮನ್ಯವನ್ನೇ ಆಹುತಿ ತೆಗೆದುಕೊಂಡಂತೆ ಇಲ್ಲಿನ ನಾಯಕನು ತನ್ನ ವಯಸ್ಸಿಗಿಂತ ಅರ್ಧ ವಯಸ್ಸಿನ ಲೂಯಿಸಾಳ ಮೋಹಪಾಶಕ್ಕೆ ಒಳಗಾಗಿ ಅದರಿಂದ ಆಚೆ ಬರಲಾಗದೆ ಚಕ್ರವ್ಯೂಹದೊಳಗೆ ಬಂಧಿತನಾಗಿ , ವರ್ತಮಾನದ ಚಿಂತನೆಯಲ್ಲಿ ತೊಡಗಿರುವ ಕಥಾ ಹಂದರ.

ಸಮಾಜದಲ್ಲಿ ಈ ರೀತಿಯ ಅನೈತಿಕ ಸಂಬಂಧಗಳಲ್ಲಿ ವ್ಯಕ್ತಿಯು ತನ್ನ ಸಾಮಾಜಿಕ ಕಳಕಳಿಯನ್ನು ಮಾನವೀಯ ಮೌಲ್ಯಗಳನ್ನು, ನೈತಿಕ ಪ್ರಜ್ಞೆಗಳನ್ನು ಹೊಂದಿರದಿದ್ದರೆ ಚಕ್ರವ್ಯೂದ ಲೇಖಕನಿಗಾದ ಪರಿಸ್ಥಿತಿಯೇ ವ್ಯಕ್ತಿಗೂ ಕಾಡುತ್ತಿರುತ್ತದೆ. ವ್ಯಕ್ತಿಯಾದವನು ಇಂತಹ ಚಕ್ರವ್ಯೂಹದ ಒಳಗೆ ಹೋಗಿ ಸಿಕ್ಕಿ ಹಾಕಿಕೊಳ್ಳುವ ಬದಲು ತಮ್ಮ ತನವನ್ನು ಎಚ್ಚರಿಸಿಕೊಳ್ಳುವ ಮೂಲಕ ಸಾಮಾಜಿಕ ಪ್ರಜ್ಞೆಯನ್ನು, ಮಾನವ ಮೌಲ್ಯಗಳಿಂದ ಮರೆಯಬೇಕು. ಇಲ್ಲವಾದರೆ ಮಹಾಭಾರತದದಲ್ಲಿ ಅಭಿಮನ್ಯು ಚಕ್ರವ್ಯೂಹದೊಳಗೆ ಸಿಲುಕಿ, ಅದರಿಂದ ಹೊರಬರಲಾಗದೆ ಅಸುನೀಗುವಂತಹ ಪರಿಸ್ಥಿತಿ ನಿರ್ಮಾಣವಾಗಬಹುದು. ಆ ರೀತಿ ನಡೆಯದಂತೆ ಎಚ್ಚರಿಕೆವಹಿಸುವಂತೆ ತಿಳಿಸಿ ಕೊಡುವುದೇ ಈ ಕಥೆಯ ಆಶಯವಾಗಿರಬಹುದು.

**'ಉದ್ಧಾರ'** – ಅಹಲ್ಯೆಯ ತಾಯಿ ಗೋಕರ್ಣದಲ್ಲಿರುವ ತನ್ನ ಅಣ್ಣನ ಮನೆಗೆ ಹೋಗಿ ಬರುತ್ತೇನೆಂದು ಹೇಳಿ ಮಧ್ಯರಾತ್ರಿಯಾದರೂ ಬರದ ಕಾರಣ ಅವಳಲ್ಲಿ ಕಂಡು ಬರುವ ಭಯ. ಅದಕ್ಕೆ ಸರಿದೂಗುವಂತೆ ಗುಡುಗು, ಮಿಂಚು, ಧಾರಾಕಾರ ಮಳೆ ಅವಳಲ್ಲಿ ಒಂದು ರೀತಿಯ ಒಂಟಿತನವನ್ನು ಭಯವನ್ನು ಉಂಟು ಮಾಡುತ್ತದೆ. ಲೇಖಕರು ಉಪಯೋಗಿಸುವ ಕಪ್ಪು ನಾಯಿಯ ಸಂಕೇತ, ಅವಳ ಬಾಳಲ್ಲಿ ಕತ್ತಲೆಯ ಛಾಯೆಯನ್ನು ಮೂಡುವಂತೆ ಸಂಕೇತಿಸಲಾಗುತ್ತದೆ. ಅವಳ ಒಂಟಿತನದಿಂದ ಒಮ್ಮೆ ಅವಳ ತಾಯಿ ಇಲ್ಲದ ಸಮಯದಲ್ಲಿ ಕೀರ್ತನಕಾರರೊಡನೆ ಬೆರೆತ ಘಟನೆ ನೆನಪಿಗೆ ಬಂದು, ಮತ್ತೆ ಆ ಪಾಪಕೃತ್ಯ ಬೈರಾಗಿಯೊಡನೆ ಎಸಗುತ್ತೇನೆ ಎನ್ನುವ ಭಯದಲ್ಲಿ ಆತ್ಮಹತ್ಯೆಗೆ ಶರಣಾಗುತ್ತಾಳೆ.

ಅಹಲ್ಯೆಯ ಮನಸ್ಸು ಭಯದ ವಾತಾವರಣದಿಂದ ಮುಕ್ತವಾಗಿದ್ದರೆ ಹೂವಿನ ಪರಿಮಳದಂತೆ, ಅವಳ ಮನಸ್ಸು ಕಂಪಿಸುತ್ತಿತ್ತು. ಭಯದಿಂದ ನಡೆದ ತಪ್ಪುಗಳು ಅವಳ ಸಾವಿಗೆ ಕಾರಣವಾಗಿ ಅಂತ್ಯವನ್ನು ಕಾಣುವಂತಾಯಿತು. ಹೂ ಬಾಡಿದ ಮೇಲೆ ಕಸದ ರಾಶಿಯನ್ನು ಸೇರುವಂತೆ ಅವಳು ಸಾವನ್ನು ದರ್ಶಿಸಿದಳು.

ಹೆಣ್ಣೊಬ್ಬಳ ಮನಸ್ಸು ಸ್ಥಿತಿಮಿತದಲ್ಲಿರದಿದ್ದರೆ ಆ ಹೆಣ್ಣಿನಲ್ಲಿ ಮೂಡುವ ಕಾರಣವಿಲ್ಲದ ಭಯ, ತಪ್ಪು ಕಲ್ಪನೆ, ಅವುಗಳೇ ಅವಳನ್ನು ಸಾವಿಗೆ ಧೂಡುತ್ತವೆ ಎಂಬುದನ್ನು ಚಿತ್ತಾಲರು ಈ ಕಥೆಯಲ್ಲಿ ಹೇಳಿದ್ದಾರೆ.

**"ಬೀಗ ಮತ್ತು ಬೀಗದ ಕೈ"** ಕಥೆಯಲ್ಲಿ ಕೇಶವನ ಅತೀವ ಭಯವೇ ಅವನ ಸಾವಿಗೆ ಕಾರಣವಾಗುತ್ತದೆ. ಇಲ್ಲಿ ಬೀಗ ಮತ್ತು ಬೀಗದ ಕೈಯನ್ನು ಚಿತ್ತಾಲರು ಆತ್ಮವಿಶ್ವಾಸದ ಸಂಕೇತವಾಗಿ ಪ್ರತಿಬಿಂಬಿಸಿದ್ದಾರೆ. ಕೇಶವನು ಬೀಗದ ಕೈ ಕಳೆದು ಹೋಯಿತೆಂದು ನೆನೆದುದರ ಪರಿಣಾಮವಾಗಿ, ಅವನ ಆತ್ಮ ವಿಶ್ವಾಸವು ಹುದುಗಿ ಕೊನೆಗೆ ಭಯದಲ್ಲೇ ಸಾವಿಗೀಡಾಗುವ ದುರಂತ ಕಥೆ.

ವ್ಯಕ್ತಿಯ ಜೀವನದಲ್ಲಿ ಭಯ ಯಾವ ರೀತಿಯ ಪರಿಣಾಮಗಳನ್ನು ಉಂಟುಮಾಡುತ್ತವೆ ಎಂಬುದನ್ನು ಬೀಗ ಮತ್ತು ಬೀಗದ ಕೈ ತಿಳಿಸಿ ಕೊಟ್ಟಿದೆ. ಭಯ ಎನ್ನುವುದೇ ನಕಾರಾತ್ಮಕ

ಅಂಶ. ಭಯದಿಂದಲೇ ವ್ಯಕ್ತಿಯು ಸಾಧಿಸಬೇಕಾದಂತಹ ಕೆಲಸ ಕಾರ್ಯಗಳು ನಿಲ್ಲಬಹುದು. ಇದರಿಂದ ವ್ಯಕ್ತಿಯು ಏಳ್ಗೆಯನ್ನೇ ಹೊಂದದೇ ಇರಬಹುದು, ಎನ್ನುವುದನ್ನು "ಚಿತ್ತಾಲರು ಬೀಗ ಮತ್ತು ಬೀಗದ ಕೈ' ಕಥೆಯಲ್ಲಿ ಹೇಳಿದ್ದಾರೆ.

೧.

**ಅಡಿ ಟಿಪ್ಪಣಿ:**

೧. “ಕಥೆಯಾದಳು ಹುಡುಗಿ” ಯಶವಂತ ಚಿತ್ತಾಲ
ಪ್ರಿಸಮ್ ಬುಕ್ ಹೌಸ್, ಬೆಂಗಳೂರು – ೨೦೦೭ – ಪುಟ ೯

೨. ಸಾಹಿತ್ಯ ಸೃಜನಶೀಲತೆ ಮತ್ತು ನಾನು– ಯಶವಂತ ಚಿತ್ತಾಲ
ಜ್ಯೋತಿಷ್ಮತಿ ಪ್ರಕಾಶನ, ಅಜ್ಜರಕಾಡು, ಉಡುಪಿ, ದ.ಕ. ೧೯೮೩

# ಅಧ್ಯಾಯ ೨
# ಚಿತ್ತಾಲರ ಕಥೆಗಳ ವಸ್ತುಗಳು

ಚಿತ್ತಾಲರ ಕಥೆಗಳು ಸಾಮಾನ್ಯವಾಗಿ ಅವರ ಅನುಭವಕ್ಕೆ ಬರುವ ಯಾವುದಾದರೊಂದು ಘಟನೆಗಳ ಸನ್ನಿವೇಶಗಳ ಸುತ್ತ ಹೆಣೆದ ಕಥೆಯಾಗಿವೆ. ವ್ಯಕ್ತಿಯನ್ನು ಚಿಂತನೆಗೊಳಪಡಿಸುವ, ಸಾಮರ್ಥ್ಯವನ್ನು ಹೊಂದಿದೆ. ಅಂತಹ ಅದ್ಭುತ ಬರವಣಿಗೆಯ ಶಕ್ತಿ ಚಿತ್ತಾಲರ ಕಥೆಗಳ ವಸ್ತುಗಳಲ್ಲಿವೆ.

ಈ ಆಧುನಿಕ ಯುಗದಲ್ಲೂ, ಅದರಲ್ಲೂ ತಂತ್ರಜ್ಞಾನ ಕ್ಷೇತ್ರದಲ್ಲಿ ಟಿ.ವಿ. ಸಾಮಾಜಿಕ ಜಾಲ–ತಾಣಗಳು, ಮೊಬೈಲ್, ಸಿನಿಮಾಗಳ ಅಬ್ಬರದ ನಡುವೆಯು ಸಾಹಿತ್ಯವು ಸಾಹಿತ್ಯಾಸಕ್ತರನ್ನು ತನ್ನತ್ತ ಸೆಳೆಯುತ್ತಿರುವುದಕ್ಕೆ ಬಹು ಮುಖ್ಯ ಕಾರಣ ನಮ್ಮ ಸಾಹಿತಿಗಳ ಬರವಣಿಗೆಯ ಶೈಲಿ ಹಾಗೂ ಅವರ ಸಾಹಿತ್ಯದ ವಿಷಯಗಳು.

ಭಾರತ ದೇಶದ ಅಂಗೀಕೃತ ಭಾಷೆಗಳಲ್ಲಿ ಎಂಟು ಜ್ಞಾನಪೀಠ ಪ್ರಶಸ್ತಿಗಳನ್ನೊಳಗೊಂಡ ಏಕೈಕ ಭಾಷೆ ನಮ್ಮ ಕನ್ನಡ ಭಾಷೆ. ಈ ಸಾಧನೆ ನಮ್ಮ ಸಾಹಿತಿಗಳ ಫಲ. ಈ ರೀತಿಯ ಸಾಧನೆಯನ್ನು ಹೊಂದಿರುವ ನಮ್ಮ ಕನ್ನಡ ಸಾಹಿತ್ಯ ಕ್ಷೇತ್ರವು ಎಷ್ಟರಮಟ್ಟಿನ ಸಾಹಿತ್ಯಾಭಿಮಾನಿಗಳನ್ನು ಹೊಂದಿದೆ ಎಂಬುದನ್ನು ತಿಳಿಯಬಹುದು. ಈ ಸಾಧನೆಗಳಿಗೆ ನಮ್ಮವರ ಕೊಡುಗೆ ಅಪಾರ.

ಅಂತೆಯೇ ಚಿತ್ತಾಲರು ಹಲವಾರು ಪ್ರಶಸ್ತಿಗಳನ್ನು ತಮ್ಮ ತೆಕ್ಕೆಗೆ ಹಾಕಿಕೊಂಡು ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ತಮ್ಮ ಛಾಪನ್ನು ಮೂಡಿಸಿದ್ದಾರೆ.

ಇವರು ಬರೆಯುವ ಕಥೆಗಳು ದೈನಂದಿನ ಬದುಕಿನಲ್ಲಿ ನಡೆಯುವ ಸ್ವಾಭಾವಿಕ ವಿಷಯಗಳೆ ಇವರ ಕಥೆಗಳ ಸಾಹಿತ್ಯಕ ವಸ್ತುಗಳಾಗಿರುತ್ತವೆ. ಅವು ಸಾಮಾಜಿಕ ನೆಲೆಯನ್ನು, ವಿಕಾಸವಾದವನ್ನು, ಮನೋವಿಜ್ಞಾನವನ್ನು, ಮಾರ್ಕ್ಸ್‌ವಾದದ ಹಿನ್ನೆಲೆಯಲ್ಲಿ ಕಥೆ ರಚಿಸುತ್ತಾರೆ. ಚಿತ್ತಾಲರ ಹಲವಾರು ಕಥಾ ಸಂಕಲಗಳು ಅವರ ಅನುಭವಕ್ಕೆ ಬಂದಂತಹ ಮನುಷ್ಯನ ಅಂತಃಕರಣವನ್ನು ಬಡಿದೆಬ್ಬಿಸುವ ನೆಲೆಗಟ್ಟಿನಲ್ಲಿ ಕಥೆಗಳಾಗಿವೆ.

ಚಿತ್ತಾಲರ ಕಥೆಗಳಲ್ಲಿ ಕಂಡು ಬರುವ ವಿಶಿಷ್ಟ ಸೇಂದ್ರಿಯತೆ, ಸಾಂಕೇತಿಕತೆ, ಅಡಿಗರು ಹೇಳುವ 'ಮತ್ತೆ', ಮತ್ತೆ ಓದಿ ತಿಳಿಯಬೇಕಾದ ಘನತೆ, ಸಾಂದ್ರತೆ, ಕಥಾ ನಿರೂಪಣೆಯಲ್ಲಿ ಕಂಡು ಬರುವ ಆತ್ಮ ವಿಶ್ವಾಸ, ವಸ್ತು ಅಭಿವ್ಯಕ್ತಿಯ ಮೇಲಿನ ಪ್ರಭುತ್ವ ಭಾಷೆ, ನಿಧಾನವಾದ ಹರಿತ ಇವೆಲ್ಲ ಅವರ ವಿಶಿಷ್ಟ ರಚನಾಕ್ರಮದ ಫಲಗಳಾಗಿವೆ.' ೧

ಅಡಿಗರು ಬರೆದಿರುವ ವಾಕ್ಯಗಳ ಹಿನ್ನೆಲೆಯಲ್ಲಿ ಯೋಚಿಸುವುದಾದರೆ ವ್ಯಕ್ತಿಯ ವಿಚಾರವಂತಿಕೆ, ಸಂಪ್ರದಾಯದ ಮನೋಭಾವನೆ, ಸಾಮಾಜಿಕ ಬಂಧನ, ಜೀವನದ ಅನಿವಾರ್ಯತೆ, ಬಾಹ್ಯ ಹಾಗೂ ಆಂತರಿಕ ಮುಖಗಳ ತೊಳಲಾಟ, ಆ ತೊಳಲಾಟದಿಂದ ಹೊರಬರಲಾಗದೆ ಕೊನೆಗೆ ಬದುಕಿನ ಅಂತ್ಯ, ಸಾವಿನ ಚಿತ್ರಣ – ಇವು ಇವರ ಕಥೆಯ ವಸ್ತು ವಿಷಯಗಳಾಗಿವೆ.

ಈ ಕಥಾ ಸಂಕಲನದಲ್ಲಿ ಬರುವ ಪ್ರತಿಯೊಂದು ಕಥೆಯ ಪಾತ್ರವನ್ನು ಲೇಖಕರು ಅನುಭವಿಸಿ, ಆ ಪಾತ್ರಗಳ ಮೂಲಕ ಸಮಾಜವನ್ನು ತಿದ್ದುವ ಪ್ರಯತ್ನವನ್ನು ಮಾಡಿದ್ದಾರೆ. ಆ ಮೂಲಕ ಪಾತ್ರಗಳಲ್ಲಿನ ಜೀವಂತಿಕೆಯು, ಸಮಾಜಕ್ಕೆ ನೈತಿಕ ಪ್ರಜ್ಞೆಯನ್ನು ಜೀವನದ ಮೌಲ್ಯಗಳನ್ನು, ಮಾನವೀಯತೆಗಳನ್ನು ಹಾಗೂ ಜನರ ಸಾಮಾಜಿಕ ಪ್ರಜ್ಞೆಯನ್ನು ಎಚ್ಚರಿಸುವಂತಹ ಕಾರ್ಯವನ್ನು ಈ ಸಂಕಲನದ ಕಥೆಗಳಲ್ಲಿ ಮಾಡಿರುವುದನ್ನು ಕಾಣಬಹುದಾಗಿದೆ.

ಪಿ.ಆರ್. ಮುತಾಲಿಕರು ಹೇಳಿರುವಂತೆ 'ಈ ಸಂಕಲನದಲ್ಲಿ ಒಟ್ಟು ಎಂಟು ಕಥೆಗಳಿವೆ' 'ಬೀಗ ಮತ್ತು ಬೀಗದ ಕೈ' ಇಂದ ಹಿಡಿದು ಕಥೆಯಲ್ಲಿ ಬಂದಾತ'ವರೆಗಿನ ಎಲ್ಲ ಕಥೆಗಳು ವೈಯುಕ್ತಿಕ ದಾಖಲೆಗಳೂ ಅಹುದು. ಪ್ರಸ್ತುತ ಸಾಮಾಜಿಕ ವ್ಯವಸ್ಥೆಯ ಸಾಮೂಹಿಕ ಪ್ರತಿಕ್ರಿಯೆಯು ಅಹುದು. ಮಹತ್ವದ ಸಂಗತಿಯ ....." ೨

---

೧. ಸಮಗ್ರ ಕಥೆಗಳು ಸಂಪುಟ – ೨, ಯಶವಂತ ಚಿತ್ತಾಲ, ಆಟ: ಯಶವಂತ ಚಿತ್ತಾಲ – ಕಥಾಸಿದ್ಧಿ – ಶಾಂತಿನಾಥ ದೇಸಾಯಿ, ೨೦೧೨, ಪುಟ(೧೧೬೯)
೨. ಸಮಗ್ರ ಕಥೆಗಳು ಸಂಪುಟ – ೨, ಪಿ.ಆರ್. ಮುತಾಲಿಕ, ಕಥೆಯಾದಳು ಹುಡುಗಿ: ಕೆಲ ಅನಿಸಿಕೆಗಳು, ಪ್ರಿಸಮ್ ಬುಕ್ಸ್ ಪ್ರೈವೇಟ್ ಲಿಮಿಟೆಡ್, ಬೆಂಗಳೂರು – ೨೦೧೨, ಪುಟ(೧೧೯೮)

ಈ ಹಿನ್ನಲೆಯಲ್ಲಿ ಚರ್ಚಿಸಿದರೆ ವೈಯುಕ್ತಿಕ ದಾಖಲೆಗಳು ಎನ್ನುವಂತಹದು ಬಹುಶಃ ಲೇಖಕರ ಜೀವನದಲ್ಲಿ ನಡೆದು ಹೋದಂತಹ ಕೆಲವೊಂದು ಘಟನೆಗಳಿಗೆ ಕಾಲ್ಪನಿಕ ಚಿತ್ರಣವನ್ನು ನೀಡಿ ವಾಸ್ತವಿಕತೆಗೆ ಒಂದು ರೂಪರೇಷೆಯನ್ನು ಕೊಟ್ಟು ಕಾಲ್ಪನಿಕತೆಗೂ–ವಾಸ್ತವಿಕತೆಗೂ ಮುಖಾಮುಖಿಯಾಗಿಸುವ ಒಂದು ಸಂಬಂಧವನ್ನು ಕಟ್ಟಿಕೊಡುವುದು, ಇವರ ಬರವಣಿಗೆಯ ಉದ್ದೇಶವಾಗಿದೆ ಎನ್ನಬಹುದು.

ಚಿತ್ತಾಲರೇ ಹೇಳುವಂತೆ "ಯಾವುದೇ ಒಂದು ಸಾಹಿತ್ಯ ಕೃತಿಗೆ ಎರಡು ಸಂಗತಿಗಳು ಪ್ರಮುಖ ಪ್ರೇರಣೆಗಳಾಗಬಲ್ಲವು ಎಂದು ನನಗನ್ನಿಸುತ್ತದೆ" ಎನ್ನುತ್ತಾರೆ. ಅವುಗಳೆಂದರೆ

* ಒಂದು ನಾವು ಬೇರು ಬಿಟ್ಟ ಬದುಕು.

* ಇವರ ಮತ್ತೊಂದು ವಾಕ್ಯ ಸಾಹಿತ್ಯದ ಹುಟ್ಟಿಗೆ ಇನ್ನೊಂದು ಪ್ರಚೋದನೆ, ಬರೆಯಬೇಕು, ಲೇಖಕನಾಗಬೇಕು ಎಂಬ ಅಹಂಕಾರ ಜನ್ಯವಾದ ಒಂದು ಅಭೀಪ್ಸೆ. [೩]

ಯಶವಂತ ಚಿತ್ತಾಲರ ಈ ಮಾತು ಅಕ್ಷರಶಃ ಸತ್ಯವಾದದ್ದು. ಬದುಕಿನಲ್ಲಿ ಏನ್ನನಾದರೂ ಸಾಧಿಸಿದರೆ ಅದಕ್ಕೆ ಮುಖ್ಯ ಕಾರಣವಾಗುವುದು ಘಟನೆಗಳು ಹಾಗೂ ಆ ಪ್ರದೇಶದಲ್ಲಿ ಬೇರುಬಿಟ್ಟು ನಮ್ಮ ಕುರುಹುಗಳು, ಚಿತ್ರಗಳು. ಅವುಗಳು ನಮ್ಮ ಮೇಲೆ ಬೀರುವ ಪ್ರಭಾವಗಳು. ಆ ಪ್ರಭಾವಗಳಿಂದ ನಾವು ಆಯ್ದುಕೊಳ್ಳುವ ವಿಚಾರಗಳು, ಸಂಗತಿಗಳು ಆ ಮೂಲಕ ನಾವು ನಡೆಯುವ ದಾರಿ ಹೀಗೆ ಸಾಗುತ್ತಾ ಕೊನೆಗೆ ಮುಟ್ಟುವ ಜಾಗ ಬಂದಾಗ ತಿರುಗಿ ನೋಡಿದರೆ ನಾವು ಸಾಗಿಬಂದ ದಾರಿಯಲ್ಲಿ ಏನೂ ಉಳಿದಿರದಿದ್ದರು, ಪಡೆಕೊಂಡ ಅನುಭವಗಳು ಮಾಸಳಿಯದೇ ಉಳಿಯುವ ಚಿತ್ರಗಳು ಸ್ಮೃತಿಯಲ್ಲೇ ಉಳಿಯುತ್ತವೆ. ಆ ಸ್ಮೃತಿಯಲ್ಲಿರುವುದನ್ನು ಬರವಣಿಗೆಗೆ ಇಳಿಸಿದಾಗಲೆ ಸಾಹಿತ್ಯವೆನಿಸುತ್ತದೆ.

ಇಂದು ಚಿತ್ತಾಲರು ಯಶಸ್ವಿ ಸಾಹಿತಿಗಳಾಗಿರುವುದಕ್ಕೆ ಅವರು ತಮ್ಮ ಹುಟ್ಟೂರಾದ ಹನೇಹಳ್ಳಿಯಲ್ಲಿ ಪಡೆದ ಅನುಭವಗಳು, ಅಲ್ಲಿನ ಸಾಮಾಜಿಕ ಚಿತ್ರಣ, ವ್ಯಕ್ತಿಗಳು ಅವರ ನಡವಳಿಕೆಗಳು, ಭಾವನೆಗಳು, ಉದ್ದೇಶಗಳು, ಚಾರಿತ್ರಿಕ ಹಿನ್ನಲೆಗಳ ಘಟನೆಗಳೇ ಕಾರಣವಾಗಿವೆ.

ಚಿತ್ತಾಲರು ಹೇಳಿರುವ ಎರಡನೇ ವಾಕ್ಯದಂತೆ ಯಾವುದೇ ಸಾಹಿತಿಯಾಗಲಿ ಅಥವಾ ಕವಿಯಾಗಲಿ, ಪ್ರಾರಂಭದಲ್ಲಿ ಕೇವಲ ಮನಶಾಂತಿಗಾಗಿಯೇ ಅಥವಾ ಆತ್ಮ ತೃಪ್ತಿಗಾಗಿಯೇ ಬರೆದರು, ಅವನ ಬರವಣಗೆಯೂ ಸುಧಾರಣೆಯಾಗುತ್ತಾ ಬಂದರೆ ಸಮಾಜದ ಪ್ರಶಂಸಾರ್ಹ ಸಾಹಿತಿಯಾಗಬೇಕೆಂದು ಅಭಿಲಾಷಿಸುತ್ತಾನೆ. ಈ ಅಭಿಲಾಷೆಗಳೇ ಅವನಿಗೆ ಸಾಹಿತ್ಯದ ವಸ್ತುಗಳನ್ನು ಹುಡುಕುವಂತೆ ಪ್ರೇರೇಪುಸತ್ತವೆ. ಅವು ಪ್ರೇಮದ ಮೇಲಾಗಲಿ, ಕಾಮದ ಮೇಲಾಗಲಿ, ಸಾವಿನ ಮೇಲಾಗಲಿ, ಇಲ್ಲವೇ ಮಾನವ ಕಳೆದುಕೊಂಡಿರುವ ನೈತಿಕ ಪ್ರಜ್ಞೆಗಳಾಗಲಿ, ಇಲ್ಲವೇ ತಾನು ಹೊಂದಿರಬೇಕಾದ ಸಾಮಾಜಿಕ ಕಳಕಳಿಗಳ ಮೇಲಾಗಲಿ ಸಾಹಿತ್ಯಗಳನ್ನು ರಚಿಸುತ್ತಾನೆ.

---

೩. ಸಾಹಿತ್ಯ ಸೃಜನಶೀಲತೆ ಮತ್ತು ನಾನು – ಯಶವಂತ ಚಿತ್ತಾಲ, (ಜ್ಯೋತಿಷ್ಮತಿ ಪ್ರಕಾಶನ) – ಅಜ್ಜರಕಾಡು, ದ. ಕನ್ನಡ ೧೯೮೩, ಪುಟ ೧೨೪

ಇಂದು ಚಿತ್ತಾಲರು ಯಶಸ್ವಿ ಸಾಹಿತಗಳಾಗಿದ್ದರೆ, ಅವರು ಆಯ್ದುಕೊಂಡು ರಚಿಸಿದ ಸಾಹಿತ್ಯದ ವಸ್ತುಗಳು. ಇವರು ವಿದ್ಯಾರ್ಥಿಗಳಿದ್ದಾಗಲೆ ಹಲವಾರು ಪುಸ್ತಕಗಳನ್ನು ಓದಿ ವಿಚಾರಗಳನ್ನು ತಿಳಿದಿದ್ದರು. ಅವರೇ ಹೇಳುವಂತೆ ಎಂ.ಎನ್. ರಾಯ್ ಅವರ ಬರವಣಿಗೆಯ ಮುಖಾಂತರ ಮಾರ್ಕ್ಸ್‌ವಾದದ ಪರಿಚಯವಾಗಿತ್ತು. [೪]

ಚಿತ್ತಾಲರೊಬ್ಬ ಮಾನವತವಾದಿಗಳು. ವಿಶ್ವದ ನಿಯಮ ಬದ್ಧತೆಗಳು ಮಾನವನಲ್ಲಿ ವಿವೇಕವಾಗಿ, ನೀತಿಯಾಗಿ, ಪ್ರೀತಿಯಾಗಿ ಉಂಟಾಗುತ್ತದೆ ಎನ್ನುವುದನ್ನು ಮಾನವತವಾದದ ಸಿದ್ಧಾಂತದ ಮುಖಾಂತರ ಕಾಣಬಹುದು. ವ್ಯಕ್ತಿ ಯಾರೇ ಆಗಲಿ, ಏನೇ ಆಗಿದ್ದರೂ ಅವನಲ್ಲಿಯೂ ಅವನದೇ ಆದಂತಹ ಮಾನವತ ಸಿದ್ಧಾಂತವನ್ನು ಹೊಂದಿರುತ್ತಾನೆ ಎಂಬುದನ್ನು ಇವರ ಕಥೆ ಕಾದಂಬರಿಗಳಲ್ಲಿ ಕಾಣಬಹುದು.

ಕಥೆಯಾದಳು ಹುಡುಗಿ ಸಂಕಲನದಲ್ಲಿ ಕಂಡು ಬರುವ ಪ್ರತಿಯೊಂದು ಪಾತ್ರಗಳು, ಒಂದು ಸಮಾಜದ ಸಾಮಾನ್ಯ ವ್ಯಕ್ತಿಯ ಜೀವನದಲ್ಲಿ ನಡೆದುಹೋದಂತಹ ನಡೆದಿರುವ ಘಟನೆಗಳ ಮೇಲೆ ರಚಿತವಾಗಿರುವ ಕಥೆಗಳು. ವಸ್ತುಗಳು ಹಾಗೂ ಅವರ ಅನುಭವಕ್ಕೆ ಬಂದಿರುವ ವಸ್ತು ಸ್ಥಿತಿಗಳು.

ಸಾಹಿತಿ ರಚಿಸುವ ಸಾಹಿತ್ಯಗಳನ್ನು ಸಾಹಿತ್ಯಾಸಕ್ತನು ಓದಿ ಅವುಗಳಲ್ಲಿನ ಧನಾತ್ಮಕ ಅಂಶಗಳನ್ನು ಬಳಸಿಕೊಂಡು ತನ್ನಲ್ಲಿರುವ ನ್ಯೂನತೆಗಳನ್ನು ತಿದ್ದಿ ಸಮಾಜಕ್ಕೆ ಉತ್ತಮ ಪ್ರಜೆಯಾದರೇನೆ ಸಾಹಿತಿಯ ಸಾಹಿತ್ಯಕ್ಕೂ ಬೆಲೆ ದೊರೆಯುವುದು. ಈ ಎಲ್ಲ ಅಂಶಗಳ ಮೇಲೆ ಸಾಹಿತಿಯ ಕಾರ್ಯ ನಿರ್ವಹಿಸಿಬೇಕಾದರೆ ಕೇವಲ ಸಾಹಿತ್ಯದ ಪರಂಪರೆಯಲ್ಲಿ ಸಾಮಾಜಿಕ ಪ್ರಜ್ಞೆಗಳಲ್ಲಿ, ಸಾಂಸ್ಕೃತಿಕ ಕಾಳಜಿಗಳಲ್ಲಿ, ಮಾನವೀಯ ಮೌಲ್ಯಗಳಲ್ಲಿ ಅಥವಾ ನೈತಿಕ ಪ್ರಜ್ಞೆಗಳಲ್ಲಿ ಚಾರಿತ್ರಿಕ–ಭೌಗೋಳಿಕ ಮಿತಿಗಳ ಪರಿಧಿಯಲ್ಲಿ ಅಭ್ಯಾಸ ಮಾಡುವಾಗ ಸಾಹಿತಿಯು ಮಾನವ ಮನಸ್ಸಿನ ವಿಕಾಸ ಸಿದ್ಧಾಂತವನ್ನು ಗಣನೆಗೆ ತೆಗೆದುಕೊಂಡು ಅಭ್ಯಸಿಸಬೇಕಾಗುತ್ತದೆ. ಆಗಲೇ ಒಂದು ಸಾಹಿತ್ಯ ಕೃತಿಯಲ್ಲಿ ಕಣ್ತೆರೆದ ಅನುಭವವು ಮೂರ್ತವಾದ ಒಂದು ಸಾಮಾಜಿಕ ಸನ್ನಿವೇಶ ಒಡಮೂಡಿ, ವಾಸ್ತವತೆ, ಸಮಕಾಲೀನ ಸಮಾಜದ ಚಿತ್ರಣ ಮೂಡಿ ಕೃತಿ ಮಹತ್ವದ್ದಾಗುವುದು.

ಈ ಸಂಕಲನದಲ್ಲಿ ಕಂಡು ಬರುವ ಪ್ರತಿಯೊಂದು ಪಾತ್ರಗಳು ಮನುಷ್ಯನ ಭಾವನೆಗಳನ್ನು ಪ್ರತಿಬಿಂಬಿಸುವ ಕನ್ನಡಿಯಂತೆ. ಕನ್ನಡಿಯಲ್ಲಿ ನಮ್ಮ ಮುಖವನ್ನು ನೋಡಿದಾಗ ಮರುಬಿಂಬಿಸುವಂತೆ ಕಥೆಗಳಲ್ಲಿನ ಪಾತ್ರಗಳಲ್ಲಿ ನಮ್ಮನ್ನು ನಾವು ಕಾಣುತ್ತೇವೆ.

ಇಂದು ಮಾನವನು ನಾಗಲೋಟದಂತೆ ಓಡುತ್ತಿರುವ ಪ್ರಪಂಚದಲ್ಲಿ ತನ್ನ ನೈತಿಕ ಪ್ರಜ್ಞೆಯ ಕಡೆ ಗಮನ ಹರಿಸದೆ ಮನಸ್ಸಿನ ಒತ್ತಡಗಳಿಗೆ ಆಸೆ–ಆಮೀಷಗಳಿಗೆ ಒಳಗಾಗಿ ತನ್ನ ತನವನ್ನು ಮರೆತಿದ್ದಾನೆ ಎಂಬುದನ್ನು ಇವರ ಕಥೆಯಾದಳು ಹುಡುಗಿಯ ಸಂಕಲನದ (ಕಥೆಯಾದಳು ಹುಡುಗಿ, ಚಕ್ರವ್ಯೂಹ, ಮುಖಾಮುಖಿ, ಉದ್ಧಾರ,, ಬೀಗ ಮತ್ತು ಬೀಗದ ಕೈ) ಕಥೆಗಳಲ್ಲಿ ಕಾಣಬಹುದಾಗಿದೆ.

---

೪. ಸಾಹಿತ್ಯ ಸೃಜನಶೀಲತೆ ಮತ್ತು ನಾನು – ಯಶವಂತ ಚಿತ್ತಾಲ, (ಜ್ಯೋತಿಷ್ಮತಿ ಪ್ರಕಾಶನ) – ಅಜ್ಜರಕಾಡು, ದ. ಕನ್ನಡ ೧೯೮೩, ಪುಟ ೧೬

ಈ ಸಂಕಲನದಲ್ಲಿ ಜನಪ್ರಿಯಗಳಿಸಿ ಇನ್ನು ಓದುಗರ ಸ್ಮೃತಿ ಪಟಲದಿಂದ ಮಾಸದೆ ಅಚ್ಚಳಿಯದೆ ಉಳಿದಿರುವುದು ಜಾನಕಿಯ ಪಾತ್ರ.

ಜಾನಕಿ ಜೋಪಡಿಯೊಂದರ ಕೂಲಿಕಾರ್ಮಿಕನ ಮಗಳು. ತಂದೆ–ತಾಯಿಗಳು ಇಲ್ಲದ ಸಮಯದಲ್ಲಿ ಗಣಿಧಣಿಗಳ ಮಕ್ಕಳು ಅವಳೊಂದು ಚಿಕ್ಕ ಹುಡುಗಿ ಎನ್ನುವುದನ್ನು ಮರೆತು ಪಶುವಿನಂತೆ ಮೇಲೆರಗಿ ಅತ್ಯಚಾರವೆಸಗುತ್ತಾರೆ. ಕೊನೆಗೆ ರಕ್ತದ ಕ್ಯಾನ್ಸರ್ ರೋಗದಿಂದ ಮರಣವನಪ್ಪುತ್ತಾಳೆ.

ನಾನು ಪ್ರತಿಸಲ ಈ ಕಥೆಯನ್ನು ಓದುವಾಗಲೂ ಒಂದು ರೀತಿಯ ಕಳವಳ ಉಂಟಾಗುತ್ತದೆ. ನಮ್ಮ ಪ್ರಸ್ತುತ ಸಮಾಜದ ವ್ಯವಸ್ಥೆಯನ್ನು ಕಣ್ಣಮುಂದೆ ತಂದು ನಿಲ್ಲಿಸುತ್ತದೆ. ಇಲ್ಲಿ ನಾವು ಇದೊಂದು ಕಥೆಯನ್ನು ಕೇವಲ ಕಥೆಯನ್ನಾಗಿ ಓದದೆ ಅದರಲ್ಲಿನ ಒಂದು ಪಾತ್ರವಾಗಿ ಓದುತ್ತೇವೆ. ಹಾಗಾಗಿಯೇ ಕೆಲವು ಪಾತ್ರಗಳು ನಮ್ಮನ್ನು ಚಿಂತನೆಗೆ ಒಳಪಡಿಸಿ ಯೋಚಿಸುವಂತೆ ಮಾಡುತ್ತವೆ. ಈ ರೀತಿಯ ಯೋಚನೆಗಳೇ ನಮ್ಮ ಪ್ರಜ್ಞಾವಂತ ನಾಗರೀಕರನ್ನು ಎಚ್ಚರಿಸುತ್ತವೆ. ನಾಗರೀಕನು ಪ್ರಜ್ಞಾವಂತನಾದರೂ, ಎಚ್ಚರಿಕೆಯಂದಲೇ ನಡೆದುಕೊಂಡರು ಈ ರೀತಿಯ ಕ್ರೌರ್ಯಗಳು ನಮ್ಮ ಸಮಾಜದಲ್ಲಿ ನಡೆಯುತ್ತಲೇ ಇವೆ.

ಕೆಲವು ದಿನಗಳ ಹಿಂದೆಷ್ಟೆ ರಾಜಧಾನಿ ದೆಹಲಿಯಲ್ಲಿ ನಡೆದ **ನಿರ್ಭಯಾ ಪ್ರಕರಣವು** ಇಡೀ ಸಮಾಜ ವ್ಯವಸ್ಥೆ ತಲೆ ತಗ್ಗಿಸುವಂತಾಗಿ ಛೀಮಾರಿ ಹಾಕುವ ಸಂದರ್ಭ ಸೃಷ್ಟಿಯಾಯಿತು. ಇಡೀ ದೇಶದ ಜನರನ್ನೇ ಬೆಚ್ಚಿ ಬೀಳಿಸಿ ಅಹೋ ರಾತ್ರಿ ನಿದ್ದೆಗೆಡಿಸಿತು. ಈ ನಿರ್ಭಯಾ ಪ್ರಕರಣಕ್ಕಾಗಿ ಸರಿಯಾದ ನ್ಯಾಯ ದೊರಕುವಂತೆ ಹೋರಾಟಗಳು ನಡೆದವು. ಈ ಪ್ರಕರಣದಿಂದ ಸಾಮಾಜಿಕ ತಾಣಗಳಲ್ಲಿ ಜನರು ವಿವಿಧ ರೀತಿಯ ಪ್ರತಿಕ್ರಿಯೆಗಳನ್ನು ನೀಡಲು ಪ್ರಾರಂಭಿಸಿದರು. ಈ ಘಟನೆಯ ನಂತರವಾದರೂ ಸಮಾಜ ಸುಧಾರಿಸುತ್ತದೆಯೆ ಎನ್ನುವಾಗಲೇ ದೇಶದ ವಿವಿಧ ಭಾಗಗಳಲ್ಲಿ ಅಪಾಪ್ತ ವಯಸ್ಸಿನ ಬಾಲಕಿಯರ ಮೇಲೆ ಅತ್ಯಾಚಾರಗಳು ಸರಣಿಯಂತೆ ನಡೆಯಲು ಪ್ರಾರಂಭಿಸಿತು. ಸಮಾಜದ ಕಾನೂನಿನ ಚೌಕಟ್ಟಿನಲ್ಲಿ ನ್ಯಾಯ–ಅನ್ಯಾಯ ತೀರ್ಮಾನವಾಗಲು ಸಮಯ ತೆಗೆದುಕೊಂಡರು. ಈ ರೀತಿಯ ಸಮಾಜಕ್ಕೆ ನನ್ನ ಧಿಕ್ಕಾರ.

ಮತ್ತೊಂದು ಪ್ರಕರಣ ಅರುಣ ಶಾನ್‌ಬಾಗ್‌ರವರದ್ದು. ಇವರೊಬ್ಬ ದಾದಿಯಾಗಿ ರೋಗಿಗಳ ಸುಶ್ರೂಷೆ ಕಾರ್ಯವನ್ನು ಕೈಗೊಳ್ಳುತ್ತಿದ್ದರು. ಅದೇ ಆಸ್ಪತ್ರೆಯ ವಾರ್ಡ್‌ಬಾಯ್ ಈಕೆಯ ಮೇಲೆ ಅತ್ಯಾಚಾರ ಎಸಗಿದ ಕಾರಣ ಸುಮಾರು ವರುಷಗಳವರೆಗೆ ನರಳಿ ಗುಣವಾಗದೆ ಇತ್ತೀಚೆಗಷ್ಟೆ ಮರಣ ಹೊಂದಿದರು ಎಂಬುದನ್ನು ಪತ್ರಿಕೆಗಳ ಮುಖಾಂತರ ಓದಿ ತಿಳಿದಿದ್ದೇವೆ.

ಈ ರೀತಿಯ ಹತ್ತು ಹಲವು ಪ್ರಕರಣಗಳನ್ನು ನಮ್ಮ ಸಮಾಜದಲ್ಲಿ ಕಂಡು ಬಂದರು ನ್ಯಾಯ ವ್ಯವಸ್ಥೆಯಲ್ಲಿ ಅನ್ಯಾಯವಾದವರಿಗೆ ನ್ಯಾಯ ದೊರಕದೆ ಇರುವುದು ಒಂದು ದುರಂತವೆ ಸರಿ. ಈ ರೀತಿಯ ಉದಾಹರಣೆಗಳನ್ನು ನೀಡುತ್ತಾ ಹೋದರೆ ಪ್ರಕರಣಗಳ ಪಟ್ಟಿ ಗಗನ ಮುಟ್ಟೀತು. ಈ ರೀತಿಯ ಕಾನೂನಿನ ವ್ಯವಸ್ಥೆಗೆ ನಮ್ಮೆಲ್ಲರ ದಿಕ್ಕಾರವಿರಲಿ.

ಚಿತ್ತಾಲರೆ ಹೇಳುವಂತೆ "ಕಥೆಯಾದಳು ಹುಡುಗಿಯಂತ ಸಾಹಿತ್ಯ ಕೃತಿಗೆ ಮೂಲವಾಗುವುದು 'ರಕ್ತ'. ಜೀವಂತ ಅನುಭವವಾದ ಬಗೆ. ಅದರಿಂದಾಗಿ ಹುಟ್ಟುವ ಭಯ ಗ್ಲಾನಿ ಆತಂಕ ಮೊದಲಾದ ಜೀವ ಹಿಂಡುವ ಭಾವನೆಗಳು ಬೆನ್ನಟ್ಟಿ ಬಂದ ಬಗೆ.....' ೫

ಚಿತ್ತಾಲರೆ ಈ ಹೇಳಿಕೆಯೂ ದೇಹಕ್ಕೆ ರಕ್ತದ ಅವಶ್ಯಕ ಹೇಗೋ ಹಾಗೆ ಸಾಹಿತ್ಯಕ್ಕೆ ಪಾತ್ರಗಳೇ ಜೀವ. 'ರಕ್ತ' ಶರೀರಕ್ಕೆ ಪೂರಕ ವಸ್ತುವಾಗಿರುವಂತೆ ಸಮಾಜದಲ್ಲಿ ಜೀವಿಸುತ್ತಿರುವ ನಾವು ಸಾಹಿತ್ಯದ ತಿರುಳಿಗೆ ಬೆಲೆ ನೀಡುತ್ತೇವೆ. ಅಲ್ಲಿ ಸೃಷ್ಟಿಯಾಗುವ ಪಾತ್ರಗಳೇ 'ರಕ್ತ' (ಭಾವನಗೆಗಳು) ಇದಕ್ಕಾಗಿಯೇ ಸಾಹಿತ್ಯದ ಹಿಂದೆ ಕೆಲಸಮಾಡುವ ಸಾಹಿತಿಗೆ ಸಾಹಿತ್ಯಾಸಕ್ತನ ಹೃದಯಕ್ಕೆ ಮುಟ್ಟಬೇಕೆಂಬ ತುಡಿತವೇ ಹೆಚ್ಚಿರುತ್ತದೆ. ಇನ್ನೊಬ್ಬನಿಗೆ ಮುಟ್ಟಿದಾಗಲೇ ಕೃತಿಗಳಲ್ಲಿನ ಪಾತ್ರಗಳ ಆಕೃತಿ ಮೂಡಿ ಜೀವಕಳೆ ಹೊಂದುತ್ತವೆ. ಆಗ ಕೃತಿಯ ಹುಟ್ಟುವಿಕೆ ಹಾಗೂ ಬೆಳವಣಿಗೆಗಳೂ ಮಾನವನ ಮನಸ್ಸಿನ ಮತ್ತು ಸಮಾಜದ ಮೇಲೆ ಒಂದು ರೀತಿಯ ಕ್ರಿಯೆ–ಪ್ರಕ್ರಿಯೆಗಳು ನಡೆಯುತ್ತವೆ. ಸಾಹಿತ್ಯ ಕೃತಿಯೊಂದರ ಮೂಲಕವೇ 'ಆಕೃತಿ' ಪಡೆಯುವರ ಭಾವನೆಗಳು ಅವುಗಳ ಉದ್ದೀಪನೆಗೆ ಕಾರಣವಾದ ನಿರ್ದಿಷ್ಟ ವಾಸ್ತಕವಷ್ಟೇ ಸೀಮಿವಾಗಿ ಉಳಿಯದೇ ಇಡಿಯ ಬದುಕಿಗೆ, ಅದರ ಅರ್ಥಕ್ಕೆ ನಮ್ಮನ್ನು ಮುಖಾಮುಖಿಯಾಗಿಸುವ ಗಾಢ ಅನುಭವನ್ನುಂಟು ಮಾಡುತ್ತದೆ. ಮನಸ್ಸಿನ ಕ್ರಿಯಾಶೀಲತೆ ಪ್ರಕಟವಾಗುವುದೇ ಗೋಚರವಾಗುವ ನಮ್ಮ 'ಮನಸ್ಸಿನ' ಮುಖಾಂತರ. ಆದ್ದರಿಂದಲೇ ಸಾಹಿತಿಗಳು ಸಾಹಿತ್ಯಾಸಕ್ತನ ಮನಸ್ಸನ್ನು ಹೊಕ್ಕುವ ಕಾರ್ಯವನ್ನು ಕಥೆಗಳ ಮೂಲಕವೇ ಸೃಷ್ಟಿಸುತ್ತಾರೆ.

ಚಿತ್ತಾಲರು 'ಲೇಖಕನ ಬೆಳವಣಿಗೆಯ ಈ ಹಂತವೆಂದರೆ ತಾನೇ ತನ್ನ ಸೃಷ್ಟಿಕ್ರಿಯೆಗೆ ಪ್ರೇರಣೆಯಾಗುವ ಹಂತ! ಉತ್ಸಾಹ ಪ್ರೋತ್ಸಾಹ ಎರಡೂ ಒಳಗಿಂದಲೇ ಹೊಮ್ಮುವ, 'ಇದು ಒಳ್ಳೆಯದು. ಬೆಲೆಯುಳ್ಳದ್ದು. ಇನ್ನೊಬ್ಬನಿಗೆ ಮುಟ್ಟಲು ತಕ್ಕದಾದದ್ದು, ಮುಟ್ಟಬೇಕಾದದ್ದು ಎಂದು ತನ್ನ ಹೃದಯದೊಳಗೇ ಮನ್ನಣೆ ಪಡೆಯುವ ಅವಸ್ಥೆ...' ೬

ಇಂದಿನ ಸಮಾಜದಲ್ಲಿ ನಾವು ಸುಸಂಸ್ಕೃತ ಮನುಷ್ಯರಾಗಿ ನಡೆಯಬೇಕಾದರೆ ನಾವು ಆರಿಸಿಕೊಳ್ಳುವ ಮಾಧ್ಯಮವು ಪ್ರಮುಖವಾಗಿರಬೇಕು. ಇಂತಹ ಜೀವಂತ ಮಾಧ್ಯಮಗಳಲ್ಲಿ ಸಾಹಿತ್ಯವು ಒಂದು. ಮನುಷ್ಯ ತನ್ನ ಬದುಕಿನ ನಕಾಶೆಯಲ್ಲಿ ಮೂಡಿಸಿಕೊಳ್ಳಬೇಕಾದ ಅತ್ಯಂತ ಮೌಲಿಕ ವಿಚಾರ ಸಂಗಂತಿಗಳಲ್ಲಿ ಕೆಲವು ಸಂಗತಿಗಳು ಸಾಹಿತ್ಯದಿಂದ ಮಾತ್ರವೇ ಒದಗಬಲ್ಲಂಥವುಗಳಾಗಿವೆ. ಅಲ್ಲದೆ ಅಂತಹ ಸಾಹಿತ್ಯಗಳಿಗೆ ಮಾತ್ರವೇ ಬೆಲೆ.

---

೫. ಸಾಹಿತ್ಯದ ಸಪ್ತಧಾತುಗಳು – ಯಶವಂತ ಚಿತ್ತಾಲ ಧರಣಿ ಪ್ರಿಂಟರ್ಸ್, ಬೆಂಗಳೂರು – ೧೦, ೨೦೧೦ ಪುಟ ೨೬

೬. ಸಾಹಿತ್ಯದ ಸಪ್ತಧಾತುಗಳು – ಯಶವಂತ ಚಿತ್ತಾಲ ಧರಣಿ ಪ್ರಿಂಟರ್ಸ್, ಬೆಂಗಳೂರು – ೧೦, ೨೦೧೦ ಪುಟ ೩೭

ಟಿ.ಪಿ.ಅಶೋಕರವರು 'ಸಾಹಿತ್ಯದ ಮುಖಾಂತರ ನಾವು ಮೊದಲಿನಿಂದಲೂ ತೊಡಗಿಸಿಕೊಂಡಿದ್ದು ಮನುಷ್ಯರಾಗಿ ಅರಳುವ ಪ್ರಕ್ರಿಯೆಯಲ್ಲಿ ಎಂದು. ಇಂದಿನ ಸಮಾಜದಲ್ಲಿ ನಾವು ಮನುಷ್ಯರಾಗಿ ಬಿಚ್ಚಿಕೊಳ್ಳಲು ಆರಿಸಿಕೊಳ್ಳಬಹುದಾದ ಜೀವಂತ ಮಾಧ್ಯಮಗಳಲ್ಲಿ ಸಾಹಿತ್ಯವೂ ಒಂದಾಗಿದೆ. ಮಾತ್ರವಲ್ಲ ಮನುಷ್ಯ ತನ್ನ ಬದುಕಿನ ನಕಾಶೆಯಲ್ಲಿ ಮೂಡಿಸಿಕೊಳ್ಳಲೇ ಬೇಕಾದ ಅತ್ಯಂತ ಮೌಲಿಕ ಸಂಗತಿಗಳಲ್ಲಿ ಕೆಲವು ಸಂಗತಿಗಳು ಸಾಹಿತ್ಯದಿಂದ ಮಾತ್ರ ಒದಗಬಲ್ಲವಂಥುವುಗಳಾಗಿವೆಯೆಂದು ಹೇಳಿದ್ದಾರೆ'. [೭]

ಈ ಸಂಕಲನದಲ್ಲಿ ಬರುವ ಕಥೆಗಳೆಲ್ಲವೂ ನಮ್ಮ ವ್ಯವಸ್ಥೆಯೊಂದರ ಚಿತ್ರಣವನ್ನು ಪ್ರತಿಬಿಂಬಿಸುತ್ತದೆ. ಜೊತೆಯಲ್ಲಿ ಕಥೆಗಳಲ್ಲಿನ ಕೆಲವು ವಿಷಯಗಳು ಮನುಷ್ಯನ ಸೃಜನಶೀಲ ಬದುಕಿಗೆ ಮೌಲ್ಯವುಳ್ಳ ಅಂಶಗಳು, ಅನಿವಾರ್ಯತೆ ಹಾಗೂ ಪೂರಕವೆಂಬ ಆಶಯವನ್ನು ವ್ಯಕ್ತಪಡಿಸಿದ್ದಾರೆ. ಜೀವನ ಬದುಕಿನ ನಡುವೆ ವ್ಯಕ್ತಿಯೆ ಸ್ಪಂದಿಸುವ ಹಾಗೂ ತೆಗೆದುಕೊಳ್ಳುವ ನಿರ್ಧಾರಗಳು ಕೆಲವೊಮ್ಮೆ ಹಲವಾರು ಅವಸ್ಥಾಂತರಗಳನ್ನೇ, ನಿರಂತರ ಬೆಳವಣಿಗೆಯನ್ನು ಕಂಡುಕೊಂಡಿರುವ ಕಥೆಗಳನ್ನು ಒಳಗೊಂಡಿದೆ ಎಂದು ಹೇಳಬಹುದು.

ಚಿತ್ತಾಲರ ಕಥೆಗಳನ್ನು ಓದುವಾಗ, ವಿಮರ್ಶಿಸುವಾಗ ಗಮನಿಸಬೇಕಾದಂತಹ ವಿಚಾರವೆಂದರೆ ಅವರದೇ ಆದ ಭಾವ ಪ್ರಪಂಚ. ಈ ಭಾವ ಪ್ರಪಂಚದಲ್ಲಿ ಕಾಳಜಿಗಳನ್ನು ಹೊಂದಿರುವ ಪಾತ್ರಗಳೇ ಹೆಚ್ಚು. ಆ ಪಾತ್ರಗಳು ಸಾಹಿತ್ಯದ ಚೌಕಟ್ಟಿನೊಳಗೆ ಸಮಾಜವನ್ನೇ ತಿದ್ದುವ ಒಂದು ಪರಿಯಾಗಿರುತ್ತದೆ. ಇದು ಚಿತ್ತಾಲರ ಸಾಹಿತ್ಯದ ಮುಖ್ಯ ವೈಶಿಷ್ಟ್ಯಗಳಲ್ಲೊಂದು.

ಚಿತ್ತಾಲರು ಮಾನವನ ವಿವಿಧ ಮುಖಗಳನ್ನು ಸಾಕಾರಗೊಳಿಸಲು ಆಯ್ಕೆಮಾಡಿಕೊಂಡದ್ದು ಸಾಹಿತ್ಯ ಕ್ಷೇತ್ರ, ಅದರಲ್ಲೂ ಸಣ್ಣ ಕಥೆಗಳು ಮನುಷ್ಯನ ಭಾವನೆಗಳು, ಪ್ರತಿಭಾವನೆಗಳು ಒಂದಕ್ಕೊಂದು ಸ್ಪಂದಿಸುತ್ತಾ ನಂತರದ ಬೆಳವಣಿಗೆಯನ್ನು ಈ ಮೂಲಕ ವ್ಯಕ್ತಪಡಿಸಿದ್ದಾರೆ. ಈ ರೀತಿ ಸಾಧಿಸುವುದಕ್ಕೆ ಅವಶ್ಯವಾದ ಪರಿಶ್ರಮ ಪೂರ್ವ ಚಿಂತನೆ, ಪ್ರಯೋಗಶೀಲತೆ ಭಾಷಾ ಸಂಪತ್ತು ಅವರಲ್ಲಿವೆ.

ಇನ್ನು ಚಿತ್ತಾಲರ 'ಕಥೆಯಾದಳು ಹುಡುಗಿ' ಸಂಕಲನದ ಪ್ರತಿಯೊಂದು ಕಥೆಗಳು ಸಾಮಾಜಿಕ ಕಳಕಳಿಯನ್ನು ಹಾಗೂ ಸಾಮಾಜಿಕ ಮುಖಾಮುಖಿಯನ್ನು ಹೊಂದಿರುವ ಕಥೆಗಳಾಗಿವೆ. ಸಮಾಜದ ಮೂಲಭೂತಗುಣವೇ ಮರೆಯಾಗಿ ಹೋದ ವ್ಯವಸ್ಥೆಯೊಂದರ ಚಿತ್ರಣವಾಗಿರುವುದರ ಜೊತೆಗೆ, ಮಾನವನ ಬದುಕಿನ ಅನಿವಾರ್ಯತೆಗೆ 'ಸೃಜನಶೀಲತ' ಬಹುಮುಖ್ಯ ಎನ್ನುವುದನ್ನು ಈ ಕಥೆಗಳ ಮೂಲಕ ಹೇಳುತ್ತಿರಬಹುದು.

ಇಲ್ಲಿನ ಕಥೆಗಳು ಹಾದಿ ತಪ್ಪಿರುವ ಪ್ರಸ್ತುತ ಸಮಾಜವನ್ನೇ ಸರಿಯಾದ ರೀತಿಯಲ್ಲಿ ನಡೆಸಬೇಕೆಂಬುದು ಸಾಹಿತಿಗಳ ಬರವಣಿಗೆಯಲ್ಲಿ ಸ್ಪಷ್ಟವಾಗಿರುತ್ತದೆ. ಕೊನೆಯ ಪಕ್ಷ ಅವರ ಬರವಣಿಗೆಯೂ ಆತ್ಮಕ್ಕಾದರೂ ಮುಟ್ಟುವಂತಹ ಕಾರ್ಯವನ್ನೇ ಮಾಡುತ್ತದೆ ಎಂಬ ನಂಬಿಕೆಯ ಮೇಲೆ ಇಂದಿಗೂ ವಿವಿಧ ರೀತಿಯ ಲೇಖನಗಳು, ಬರವಣಿಗೆಗಳು, ಸಾಹಿತ್ಯಗಳು ಸಾಹಿತಿಗಳಿಂದ ಸೃಷ್ಟಿಯಾಗುತ್ತಲೇ ಇವೆ.

---

೭. ಸಮಗ್ರ ಕಥೆಗಳು. ಸಂಪುಟ – ೨, ಯಶವಂತ ಚಿತ್ತಾಲರ ಕಥೆಯಾದಳು ಹುಡುಗಿ ಟಿ.ಪಿ. ಅಶೋಕ ೨೦೧೨, ಪ್ರಿಸಮ್ ಬುಕ್ಸ್ ಪ್ರೈ. ಲಿ. ಬೆಂಗಳೂರು. ಪುಟ ೧೨೧೧

ಸಮಾಜದಲ್ಲಿ ಕಳೆದು ಹೋಗಿರುವಂತಹ ಮೌಲ್ಯಗಳು ಮಾನವ ಪ್ರಜ್ಞೆ, ಪ್ರೀತಿ, ಕರುಣೆ, ಸಹಾಯಗಳನ್ನು ಮರೆತು ಮನುಷ್ಯನ ಆಸೆ – ಆಕಾಂಕ್ಷೆಗಳಿಗೆ ಬಲಿಯಾಗಿ ಹುಚ್ಚು ಕುದುರೆಯಂತೆ ಅದರ ಹಿಂದೆ ಓಡುತ್ತ ತಾನು ಸೇರಬೇಕಾಗಿರುವ ಗುರಿಯನ್ನೇ ತಲುಪುವ ಬದಲು ಆಯತಪ್ಪಿ ಅಧಃಪತನವನ್ನು ಕಾಣುತ್ತಿದ್ದಾನೆ. ಇಂತಹವುಗಳಿಂದ ಮನುಷ್ಯನನ್ನು ಎಚ್ಚೆತ್ತುಕೊಳ್ಳುವಂತೆ ಮಾಡಿ, ಮಾನವನ ಕಾರ್ಯವನ್ನು ಜೀವನದ ರಸವನ್ನು ತಿಳಿಸುವುದೇ ಸಾಹಿತ್ಯದ ಉದ್ದೇಶವಾಗಿದೆ. ಬಹುಶಃ ಈ ರೀತಿಯ ಉತ್ತಮ ಅಂಶಗಳನ್ನಿಟ್ಟುಕೊಂಡು ರಚಿತವಾಗಿರುವುದೇ 'ಕತೆಯಾದಳು ಹುಡುಗಿ' ಸಂಕಲನದ ಕಥೆಗಳು.

ಬಸವರಾಜ ಕಲ್ಗುಡಿಯವರು ಚಿತ್ತಾಲರ ಕಥೆಯಾದಳು ಹುಡುಗಿ ಕಥಾಸಂಕಲನವು ಜೀವನ, ಬದುಕಿನ ಬಗ್ಗೆ ವ್ಯಕ್ತಿಯು ಸ್ಪಂದಿಸುವ ಹಾಗು ತೆಗೆದುಕೊಳ್ಳುವ ನಿರ್ಧಾರಗಳು ದೃಷ್ಟಿಯಿಂದ ಹಲವಾರು ಅವಸ್ಥಾಂತರಗಳನ್ನು, ನಿರಂತರ ಖಚಿತವಾಗಿ ಹೇಳಬಹುದು. ಈ ದೃಷ್ಟಿಯಿಂದ ಅದು ಅವರ ಪ್ರಾತಿನಿಧಿಕ ಸಂಕಲನವೂ ಹೌದು...

ಚಿತ್ತಾಲರ ಕಥೆಗಳು ತಾತ್ವಿಕ ನೆಲೆಗಟ್ಟಿನಲ್ಲಿ ರಚಿತವಾಗಿರುವ ಕಥೆಗಳಾಗಿರುತ್ತವೆ. ಇವರ ಬಹುಭಾಗ ಕಥೆಗಳ ಓದಿದಾಗ ವ್ಯಕ್ತಿಕೇಂದ್ರಿತದಂತೆ ಕಂಡರೂ ಅದು ಸಮುದಾಯ ಕೇಂದ್ರಿತವಾಗಿರುತ್ತದೆ. ಹೀಗಾಗಿಯೇ ಇಂದಿಗೂ ಇವರ ಬರವಣಿಗೆಯು ವಿಶಿಷ್ಟತೆಯನ್ನ ಹೊಂದಿದೆ. ಹಾಗು ಜೀವಂತಿಕೆಯನ್ನ ಕಂಡಿದೆ. ಇವರ ಬರವಣಿಗೆಯು ಪ್ರತಿಪಾದಿಸುವುದು ಸಾಮಾಜಿಕ ಮೌಲ್ಯಗಳನ್ನು ಹಾಗೂ ನೈತಿಕ ಪ್ರಜ್ಞೆಗಳನ್ನು.

ಮನುಷ್ಯನ ಜೀವನದ ವಿವಿಧ ಮುಖಗಳನ್ನು, ಮಜಲಗಳನ್ನು ತೋರಿಸುವ ಕಥೆಗಳೇ ಚಿತ್ತಾಲರ ಕಥೆಗಳಲ್ಲಿ ಅತಿ ಹೆಚ್ಚು ಪ್ರತಿಬಿಂಬಿತವಾಗಿರುವಂತೆ ಕಾಣುತ್ತವೆ. ಜೀವನದಲ್ಲಿ ನಡೆಯುವ ಅನೀರಿಕ್ಷಿತ ಘಟನೆಗಳು, ಮನುಷ್ಯನನ್ನೆ ಹಾಸುಹೊಕ್ಕಾಗಿಸಿ ಪರಿಸ್ಥಿತಿಗೆ ಸರಿ ಹೊಂದುಕೊಳ್ಳುವಂತೆ ನಡೆಸುತ್ತವೆ. ನಿರ್ಧರಿಸುತ್ತವೆ. ಬದುಕಿನಲ್ಲೇ ತನ್ನನ್ನು ಕಂಡು ಹಿಡಿಯಲಾಗದಷ್ಟು ಅಥವಾ ಮಾನವ ತನ್ನ ಬದುಕಿನ ಸಂಕೋಲಗಳಿಂದ ಆಚೆ ಬಾರದೆ ಅದರಲ್ಲೇ ಸಿಲುಕಿ ತನ್ನ ಅವನತಿಯನ್ನು ಕಾಣುತ್ತಾನೆ ಎಂಬುದೇ ಕಥೆಗಳ ಸಾರವಾದರೂ, ನಾವು ಮಾನವನು (ನಾವು) ಇವುಗಳಿಂದ ಎಚ್ಚೆತ್ತುಕೊಳ್ಳಬೇಕೆಂಬುದೇ ಇದರ ಹಿಂದಿನ ಉದ್ದೇಶವಿರಬಹುದು.

ಕೊನೆಯದಾಗಿ ಟಿ.ಪಿ. ಅಶೋಕರ ಮಾತಿನಲ್ಲಿ ಹೇಳುವುದಾದರೆ "ಕಥೆಯಾದಳು ಹುಡುಗಿ ಸಂಕಲನದ ಬಹಳಷ್ಟು ಕಥೆಗಳ ವಸ್ತು ಕಥೆ ಬರೆಯುವ ಸಮಸ್ಯೆಯನ್ನೇ ಕುರಿತದ್ದು ಎಂದು ಮೇಲು ನೋಟಕ್ಕೆ ಅನ್ನಿಸುತ್ತದೆ. ಆದರೆ ಈ ಸಮಸ್ಯೆಗೂ ಬದುಕನ್ನು, ಮನುಷ್ಯನನ್ನು ಅರ್ಥೈಸಿಕೊಳ್ಳುವ ಸಮಸ್ಯೆಗೂ ಸಾವಯವ ಸಂಬಂಧವಿರುವುದರಿಂದಲೇ ಚಿತ್ತಾಲರ ಕಥೆಗಳು ಕೇವಲ ಬೌದ್ಧಿಕ ಕಸರತ್ತುಗಳೇ ಅನ್ನಿಸುವುದಿಲ್ಲ. 'ಮಾನವನ ಬಗ್ಗೆ ಹೇಳ ಹೊರಟಿದ್ದೆಲ್ಲವೂ ಕಥಾನಕದ ಧಾಟಿ ಹಿಡಿಯುತ್ತದೆ'. ಎಂದು ಚಿತ್ತಾಲರು ಹೇಳುತ್ತಾರೆ. ಪರ್ಯಾಯವಾಗಿ ಕಥಾನಕದ ಬಗ್ಗೆ ಅವರು ಪ್ರಸ್ತಾಪಿಸುವ ಅಂಶಗಳು ಮೂಲಭೂತವಾಗಿ ಮಾನವನನ್ನೇ ಕುರಿತ ಪ್ರಸ್ತಾಪವೇ ಆಗಿಬಿಡುವುದು ಮೆಚ್ಚುಗೆ ಪೂರಿತ ಬೆರಗು ಹುಟ್ಟಿಸುತ್ತದೆ. 'ನಮ್ಮೊಳಗಿನ ಮನುಷ್ಯನನ್ನೇ ಹುಡುಕುವ' ಆಶಯವಾಗಿ ಮುಖ್ಯವಾಗುತ್ತದೆ. ಇದರಿಂದಾಗಿ ಚಿತ್ತಾಲರ

ಕಥೆಗಳು ಸಾಧಿಸಿಕೊಳ್ಳುವ ಆಯಾಮ ಎರಡು ರೀತಿಯದು. ತಮ್ಮ ಮಾನವೀಯ ಕಾಳಜಿಗಳಿಂದ ಎಷ್ಟೋ ಅಷ್ಟೇ ಪ್ರಕಾರದ ಸಾಧ್ಯತೆಗಳ ದೃಷ್ಟಿಯಿಂದಲೂ ಅವರ ರಚನೆಗಳು ಮಹತ್ವಪೂರ್ಣವಾಗುತ್ತವೆ'. [೮] ಎಂಬ ಮಾತುಗಳು ಅಕ್ಷರಶಃ ಸತ್ಯವೆನ್ನಬಹುದು.

೮ ಸಮಗ್ರ ಕಥೆಗಳು. ಸಂಪುಟ – ೨, ಯಶವಂತ ಚಿತ್ತಾಲರ ಕಥೆಯಾದಳು ಹುಡುಗಿ ಟಿ.ಪಿ. ಅಶೋಕ ೨೦೧೨, ಪ್ರಿಸಮ್ ಬುಕ್ಸ್ ಪ್ರೈ ಲಿ. ಬೆಂಗಳೂರು. ಪುಟ ೧೨೦೭

**ಅಡಿ ಟಿಪ್ಪಣಿಗಳು**

೧. ಸಮಗ್ರ ಕಥೆಗಳು ಸಂಪುಟ – ೨, ಯಶವಂತ ಚಿತ್ತಾಲ
ಆಟ: ಯಶವಂತ ಚಿತ್ತಾಲ – ಕಥಾಸಿದ್ಧಿ – ಶಾಂತಿನಾಥ ದೇಸಾಯಿ
ಪುಟ(೧೧೬೯)

೨. ಸಮಗ್ರ ಕಥೆಗಳು – ಸಂಪುಟ – ಪಿ.ಆರ್. ಮುತ್ತಾಲಿಕ್
ಪ್ರಿಸಮ್ ಬುಕ್ಸ್ ಪ್ರೈ. ಲಿ – ೨೦೧೨
ಪುಟ ೧೧೯೮

೩. ಸಾಹಿತ್ಯ ಸೃಜನಶೀಲತೆ ಮತ್ತು ನಾನು – ಯಶವಂತ ಚಿತ್ತಾಲ
(ಜ್ಯೋತಿಷ್ಮತಿ ಪ್ರಕಾಶನ) – ಅಜ್ಜರಕಾಡು, ದ. ಕನ್ನಡ ೧೯೮೩
ಪುಟ ೧೨೪

೪. ಸಾಹಿತ್ಯ ಸೃಜನಶೀಲತೆ ಮತ್ತು ನಾನು – ಯಶವಂತ ಚಿತ್ತಾಲ
ಜ್ಯೋತಿಷ್ಮತಿ ಪ್ರಕಾಶನ – ಅಜ್ಜರಕಾಡು, ದ. ಕನ್ನಡ ಹನೇಹಳ್ಳಿ
೧೯೮೩ ಪುಟ ೧೬

೫. ಸಾಹಿತ್ಯದ ಸಪ್ತಧಾತುಗಳು – ಯಶವಂತ ಚಿತ್ತಾಲ ಧರಣಿ ಪ್ರಿಂಟರ್ಸ್
ಬೆಂಗಳೂರು – ೧೦, ೨೦೧೦ ಪುಟ ೨೬

೬ ಸಾಹಿತ್ಯದ ಸಪ್ತಧಾತುಗಳು – ಯಶವಂತ ಚಿತ್ತಾಲ ಧರಣಿ ಪ್ರಿಂಟರ್ಸ್
ಬೆಂಗಳೂರು – ೧೦, ೨೦೧೦ ಪುಟ ೩೭

೭ ಸಮಗ್ರ ಕಥೆಗಳು. ಸಂಪುಟ – ೨
ಯಶವಂತ ಚಿತ್ತಾಲರ ಕಥೆಯಾದಳು ಹುಡುಗಿ ಟಿ.ಪಿ. ಅಶೋಕ ೨೦೧೨
ಪ್ರಿಸಮ್ ಬುಕ್ಸ್ ಪ್ರೈ. ಲಿ. ಬೆಂಗಳೂರು. ಪುಟ ೧೨೧೧

೮. ಸಮಗ್ರ ಕಥೆಗಳು. ಸಂಪುಟ – ೨
ಯಶವಂತ ಚಿತ್ತಾಲರ ಕಥೆಯಾದಳು ಹುಡುಗಿ ಟಿ.ಪಿ. ಅಶೋಕ ೨೦೧೨
ಪ್ರಿಸಮ್ ಬುಕ್ಸ್ ಪ್ರೈ. ಲಿ. ಬೆಂಗಳೂರು. ಪುಟ ೧೨೦೭

## ಅಧ್ಯಾಯ ೩
## ಚಿತ್ತಾಲರ ಬರವಣಿಗೆಯಲ್ಲಿನ ಭಾಷಾಭಿವ್ಯಕ್ತಿ

'ಭಾಷೆ' ಎನ್ನುವಂತಹದ್ದು ಮಾನವನ ಜೀವನದಲ್ಲಿ ಪ್ರಮುಖ ಪಾತ್ರವಹಿಸುತ್ತವೆ. ಅವನ ದೈನಂದಿನ ಬದುಕಿನಲ್ಲಿ 'ಭಾಷೆ' ಒಂದು ಸಂವಹನ ಮಾಧ್ಯಮ.

ವ್ಯಕ್ತಿಯೊಬ್ಬನು ತನ್ನ ಅನಿಸಿಕೆಗಳನ್ನು, ಅಭಿಪ್ರಾಯಗಳನ್ನು ಭಾಷೆಯ ಮೂಲಕವೇ ಮತ್ತೊಬ್ಬರಿಗೆ ಅಭಿವ್ಯಕ್ತಿಗೊಳಿಸುತ್ತಾನೆ. ಆ ಭಾಷೆಯ ಮೂಲಕವೇ ತನ್ನ ಸ್ಥಾನವನ್ನು ಗುರುತಿಸಿಕೊಳ್ಳುತ್ತಾನೆ. ಅಂದರೆ ವ್ಯಕ್ತಿಯು ಉಪಯೋಗಿಸುವ ಭಾಷೆ, ಶೈಲಿ ಇವೆಲ್ಲವೂ ಬೇರೊಬ್ಬರ ಮೇಲೆ ಗಂಭೀರ ರೀತಿಯ ಪರಿಣಾಮವನ್ನುಂಟು ಮಾಡುತ್ತವೆ. ಭಾಷೆಯಿಂದಲೇ ವ್ಯಕ್ತಿಯನ್ನು, ವ್ಯಕ್ತಿತ್ವವನ್ನು, ಗುಣಗಳನ್ನು ಅಳೆಯುವ ಸಾಧ್ಯವಿದೆ. ಆದ್ದರಿಂದಲೇ ಭಾಷೆ ವ್ಯಕ್ತಿಯೊಬ್ಬನನ್ನು ಅಳೆಯುವ ಮಾನದಂಡ ಎಂದರೆ ತಪ್ಪೇನಿಲ್ಲ.

ಒಳ್ಳೆಯ ಭಾಷೆಯೆಂದರೆ ಅದ್ಭುತವಾದಂತಹ ಶಬ್ದ ಸಂಗ್ರಹವನ್ನು ಹೊಂದಿರಬೇಕು. ಶಬ್ದಗಳ ಜೋಡಣೆಯಿಂದ ವಾಕ್ಯಗಳ ಪ್ರಯೋಗದಿಂದ ಅನುಭವಗಳನ್ನು, ಭಾವನೆಗಳನ್ನು ಶಬ್ದಗಳ ಮೂಲಕ ಸಂವಹನಗೊಳಿಸಬಹುದು. ಸಂವಹನಗೊಳಿಸಬೇಕಾದರೆ ನಾವು ಉಪಯೋಗಿಸುವ ಭಾಷಾ ಸಂಪತ್ತು ಉತ್ತಮವಾಗಿದ್ದರೆ ಮಾತ್ರ ಅದು ಇನ್ನೊಬ್ಬರನ್ನು ಬಹುಬೇಗ ತಲುಪುವುದು.

ಭಾಷಾ ಸಂಪತ್ತನ್ನು ವ್ಯಕ್ತಿಯು ಶಿಕ್ಷಣದ ಮೂಲಕ, ನಿಯತಕಾಲಿಕೆಗಳು, ವೃತ್ತಪತ್ರಿಕೆಗಳ ಮೂಲಕ, ದೂರದರ್ಶನ, ಜಾಹೀರಾತುಗಳ ಮೂಲಕ, ಸುತ್ತಮುತ್ತಲ ಜನರಿಂದ ತಿಳಿಯುವ ವರ್ತಮಾನದ ಮೂಲಕ ಅವನು ಶಬ್ದಗಳನ್ನ ಗ್ರಹಿಸುತ್ತಾನೆ. ಆ ಗ್ರಹಿಸಿದ ಶಬ್ದಗಳನ್ನು ಸಂದರ್ಭಕ್ಕೆ ಸರಿಯಾಗಿ ಉಪಯೋಗಿಸುವುದೇ ಒಬ್ಬ ಉತ್ತಮ ಭಾಷಾಕಾರನ ಲಕ್ಷಣವಾಗುತ್ತದೆ. ಸಾಹಿತಿಗಳಾದರೂ ಭಾಷಾ ಪ್ರಯೋಗವನ್ನು ಸರಿಯಾದ ರೀತಿಯಲ್ಲಿ ಬಳಸಬೇಕು. ಆಗಲೇ ಅವರ ಕೃತಿಗಳಿಗೂ ಸಾಹಿತಿಗೂ ಬೆಲೆ.

ಸಾಹಿತಿಯಾದವನು ಉತ್ತಮ ಶಬ್ದ ಭಂಡಾರವನ್ನು ಹೊಂದಿದ್ದರೆ ಸಾಲದು. ಶಬ್ದಗಳನ್ನ ಉಪಯೋಗಿಸುವ ಶೈಲಿ ಗೊತ್ತಿರಬೇಕು. ಸಾಹಿತ್ಯದ ವಸ್ತುಗಳಿಗೆ ಆಕೃತಿ, ಆಕಾರಗಳನ್ನು ನೀಡಲು, ಅವನಲ್ಲಿರುವ ಉತ್ತಮ ಶಬ್ದಗಳನ್ನ ಉಪಯೋಗಿಸಿದಾಗಲೇ ಸಾಹಿತಿ ಮಾಡಿದಂತ ಕಾರ್ಯ ಬಹುಬೇಗ ಸಹೃದಯನಿಗೆ ತಲುಪುವುದು.

'ಸಾಹಿತ್ಯ' ಹಾಗೂ 'ಸಮಾಜ' ಇವುಗಳ ಸಂಬಂಧ ಬಹುಶಃ ಭಾಷೆ ಮತ್ತು ಸಮಾಜ ಇವುಗಳ ಸಂಬಂಧದಷ್ಟೇ ಹಳೆಯದೇನೋ! ಭಾಷೆ ಒಂದು ಸಾಮಾಜಿಕ ಘಟನೆ. ಸಾಮಾಜಿಕತೆ ಇಲ್ಲದೆ ಭಾಷೆ ಇಲ್ಲ. ಸಮಾಜದಲ್ಲಿ ಬೇರು ಬಿಟ್ಟ ಭಾಷೆಯ ಮೂಲಕವೇ ಸಾಹಿತ್ಯದಲ್ಲಿ ಸಮಾಜ ಪ್ರವೇಶಿಸುತ್ತದೆ. ಆವಿಷ್ಕಾರಗೊಳ್ಳುತ್ತದೆ.(೧)

ಸಾಹಿತ್ಯ ಮತ್ತು ಭಾಷೆಗಳು ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ. ಸಾಹಿತ್ಯದ ಮೌಲ್ವಿಕ ವಿಚಾರಗಳನ್ನ ಅಭಿವ್ಯಕ್ತಗೊಳಿಸಲು ಭಾಷೆ ಸಹಾಯಕವಾಗುತ್ತದೆ. ಮನುಷ್ಯನ ಭಾವನೆಗಳನ್ನು, ವ್ಯಕ್ತಿಪಡಿಸಲು ಹಾಗು ಅರ್ಥೈಸಿಕೊಳ್ಳಲು ಭಾಷೆ ಒಂದು ಸಂವಹನ ಸಾಧನವಾಗಿದೆ. ಇಂದು ಪ್ರಪಂಚದಲ್ಲಿ ಸಾವಿರಾರು ಭಾಷೆಗಳಿದ್ದು ಅವುಗಳೇ ಉಪಭಾಷೆಗಳಾಗಿ ಕವಲೊಡಿದಿವೆ.

ಉತ್ತಮ ಪದಗಳನ್ನು ಉಪಯೋಗಿಸುವುದು ಭಾಷೆಯ ಒಂದು ಕಾರ್ಯವಾಗಿದೆ. ನಮ್ಮ ಭಾವನೆಗಳಿಗೆ ಬೇರೊಬ್ಬರು ಪ್ರತಿಸ್ಪಂದಿಸಲು ಭಾಷೆ ಒಂದು ಮಾಧ್ಯಮವಾಗಿದೆ. ಕೇವಲ ಸಂಜ್ಞೆಗಳ ಮೂಲಕ ಭಾವನೆಗಳನ್ನ ತೋರ್ಪಡಿಸುತ್ತಿದ್ದ ಮಾನವ ಇಂದು ಹತ್ತಾರು ಭಾಷೆಗಳನ್ನು ಉಪಯೋಗಿಸಬಲ್ಲನು. ತನ್ನ ಭಾವನೆಗಳನ್ನ ಆ ಹತ್ತಾರು ಭಾಷೆಗಳ ಮುಖಾಂತರ ಅಭಿವ್ಯಕ್ತಪಡಿಸುವನು. ಈ ಕಾರ್ಯವು ಸಮಾಜಗಳ ಮುಖಾಂತರವೇ ನಡೆಯುತ್ತದೆ. ಈ ಸಮಾಜಗಳಲ್ಲಿ ನಡೆಯುವುದನ್ನೆ ಸಾಹಿತ್ಯವು ತನ್ನದೇಯಾದಂತಹ ಭಾಷೆಯಲ್ಲಿ ಅಭಿವ್ಯಕ್ತಗೊಳಿಸುತ್ತದೆ. ಅಂತಹ ಸಾಹಿತ್ಯವನ್ನೇ ಓದಿ ಮಾನವ ಮನಸ್ಸಿನ ಭಾವನೆಗಳ ಸ್ಪರ್ಶವನ್ನು ಪಡೆಯುತ್ತಾನೆ.

ಮಾನವನು ಸ್ವತಂತ್ರವಾಗಿ ವಿಚಾರಿಸುವ ಶಕ್ತಿಯನ್ನು ಹೊಂದಿದ್ದಾನೆ. ಅವುಗಳನ್ನು ಅಭಿವ್ಯಕ್ತಿಸಲು ಭಾಷೆ ಸಹಕಾರಿಯಾಗಿದೆ. ವೈಚಾರಿಕ ಪ್ರಜ್ಞೆಯೊಂದಿದ್ದರೆ ಸಾಲದು; ಅದಕ್ಕೆ ಸರಿಯಾದ ಭಾವನೆಗಳಿರಬೇಕು. ಆ ಭಾವನೆಗಳನ್ನ ಅಭಿವ್ಯಕ್ತಪಡಿಸಲು ನಿರಹಂಕಾರಿಯಾದ ಎದೆಗಾರಿಕೆಯೂ ಬೇಕು. ಅಂತಹ ಎದೆಗಾರಿಎಯನ್ನ ಹೊಂದಿರುವ ಚಿತ್ತಾಲರು ಸಮಾಜದಲ್ಲಿ ನಡೆಯುತ್ತಿರುವ ಅನ್ಯಾಯ, ಅಧರ್ಮ, ಭ್ರಷ್ಟಾಚಾರ ಮೋಸ ಹಾಗೂ ಮನುಷ್ಯನ ಅಂತರಾಳದ ಭಾವನೆಗಳ ವಿಷಯಗಳನ್ನ ಸಮಾಜಕ್ಕೆ ತಿಳಿಯಪಡಿಸಬೇಕಾದರೆ ಮಾಧ್ಯಮದ ಅವಶ್ಯಕತೆಯಿದೆ. ಅದುವೇ ಭಾಷಾಭಿವ್ಯಕ್ತಿ. ಆ ಭಾಷಾಭಿವ್ಯಕ್ತಿಯನ್ನ ಬರವಣಿಗೆಗಳ ಮೂಲಕ ತೋರ್ಪಡಿಸುವವನೇ ನಿಜವಾದ ಸಾಹಿತಿ. ಅಂತಹವರ ಸಾಲಿಗೆ ಯಶವಂತ ಚಿತ್ತಾಲರು ಸೇರುತ್ತಾರೆ.

ಚಿತ್ತಾಲರೆ ಹೇಳುವಂತೆ "ಲೇಖಕನಾದವನು ತನ್ನ ವೈಯುಕ್ತಿಕ ಲೋಕವನ್ನ ತನ್ನ ಅನನ್ಯವಾದ ಅನುಭವಗಳ, ವೇದನೆಗಳ, ಕನಸುಗಳ, ಭಾವ-ಭಾವನೆಗಳ, ಆತ್ಮೀಯ ಒಳ ಜಗತ್ತನ್ನು ವ್ಯಕ್ತಿ ನಿರಪೇಕ್ಷವಾದ ಸಾಮಾಜಿಕ ನುಡಿಕಟ್ಟಿನಲ್ಲಿ ಸಮುದಾಯದ ಭಾಷೆಯಲ್ಲಿ ರೂಪಿಸಬೇಕಾದ ಜರೂರಿಯಲ್ಲಿಯೇ ಲೇಖಕನ ಹೋರಾಟವಷ್ಟೇ ಅಲ್ಲ, ಅವನ ಸೃಷ್ಟಿಕಾರ್ಯದ ಸಾರ್ಥಕತೆಯೂ ಅಡಗಿದೆ"(೨)

---

೧. ಸಾಹಿತ್ಯ ಸೃಜನಶೀಲತೆ ಮತ್ತು ನಾನು - ಯಶವಂತ ಚಿತ್ತಾಲ, ಸಾಮಾನ್ಯ ಭಾಷೆ ಕಾವ್ಯ ಭಾಷೆ - ಜ್ಯೋತಿಷ್ಮತಿ ಪ್ರಕಾಶನ, ಅಜ್ಜರ ಕಾಡು , ಉಡುಪಿ, ೧೯೯೩ ಪುಟ ೯೯

೨. ಸಾಹಿತ್ಯ ಸೃಜನಶೀಲತೆ ಮತ್ತು ನಾನು - ಯಶವಂತ ಚಿತ್ತಾಲ, ಸಾಮಾನ್ಯ ಭಾಷೆ ಕಾವ್ಯ ಭಾಷೆ - ಜ್ಯೋತಿಷ್ಮತಿ ಪ್ರಕಾಶನ, ಅಜ್ಜರ ಕಾಡು, ಉಡುಪಿ, ೧೯೯೩ ಪುಟ ೧೦೧

ಚಿತ್ತಾಲರ ಕಥನಸಾಹಿತ್ಯ ಪ್ರಕಾರಕ್ಕೆ ಅನ್ವಯಿಸಿ ಹೇಳುವುದಾದರೆ ಕೃತಿಯ ವಸ್ತುವಿನಲ್ಲಿ ಭಾಷೆಯ ಬಳಕೆ ಬಹುಮುಖ್ಯವಾದದು. ಸಾಹಿತಿ ತನ್ನ ಅನುಭವಗಳನ್ನು, ಭಾವನೆಗಳನ್ನು ಅಭಿವ್ಯಕ್ತಗೊಳಿಸಲು ಭಾಷೆಯ ಕಾರ್ಯ ಮಹತ್ವದ್ದಾಗಿರಬೇಕು. ಆಗಲೇ ಸಾಹಿತ್ಯಾಸಕ್ತನಿಗೂ ಕೃತಿಯ ಉದ್ದೇಶವರಿತು ಹಾಗೂ ಸಾಹಿತಿಯು ತಾನು ಸಮಾಜಕ್ಕೆ ಹೇಳಬೇಕೆಂದಿರುವ ವಿಷಯದ ಉದ್ದೇಶ ಮುಟ್ಟಿಸಲು ಸಾಧ್ಯ. ಅಲ್ಲದೇ ಸಾಹಿತ್ಯವು ನಮ್ಮನ್ನು ಭಾವನಾತ್ಮಕವಾಗಿ ಹೊಕ್ಕಿ ನಮ್ಮ ಅರಿವನ್ನು ತಟ್ಟುವಂತೆ ಮಾಡುವುದೇ ಸಾಹಿತ್ಯದ ಭಾಷೆಯ ಕಾರ್ಯ.

ಸಾಹಿತ್ಯ ಅಭಿವ್ಯಕ್ತಗೊಳ್ಳುವುದು ಭಾಷೆಯಲ್ಲಿ. ಭಾಷೆಯೂ ವ್ಯಕ್ತಿಯ ಮೇಲೆ ಪರಿಣಾಮ ಮಾಡಬಲ್ಲ ಶಕ್ತಿಯನ್ನು ಹೊಂದಿರುತ್ತದೆ. ಅಂತಹ ಮಾಂತ್ರಿಕ ಬಲ ಭಾಷೆಯಲ್ಲಿ ಅಡಗಿದೆ. ಸಾಹಿತಿ ತಾನು ಉಪಯೋಗಿಸುವ ಭಾಷೆ ವ್ಯಕ್ತಿಯ ಮೇಲೆ ಆಗುವ ಬದಲಾವಣೆಯನ್ನು ಅವಲಂಬಿಸಿರುತ್ತದೆ. ಆ ಬದಲಾವಣೆ ನಡೆದಾಗಲೇ ಸಾಹಿತಿಯ ಬರವಣಿಗೆಗೆ ಬೆಲೆ ಹಾಗು ಸ್ಪೂರ್ತಿಯ ಸೆಲೆ.

ಸಾಹಿತ್ಯದಂತಹ ಸೃಷ್ಟಿಕಾರ್ಯದಲ್ಲಿ ಸಾಹಿತಯು ತನ್ನದೇ ಆದ ರೀತಿಯ ಕ್ರಿಯೆಯನ್ನು ಒಳಗೊಂಡಿರುತ್ತದೆ ಎಂಬುದನ್ನು ಮರೆಯಬಾರದು. ಈ ಕ್ರಿಯೆ ಸಂಭವಿಸುವುದು ಸಂಪೂರ್ಣವಾಗಿ ಭಾಷೆಯಲ್ಲಿ. ಭಾಷೆಯನ್ನು ಸರಿಯಾದ ರೀತಿಯಲ್ಲಿ ದುಡಿಸಿಕೊಂಡಾಗಲೇ ಸಾಹಿತ್ಯದ ಕಲಾತ್ಮಕ ಅಂಗ ತಿಳಿಯುತ್ತದೆ. ಸಾಹಿತಿ ಸಾಹಿತ್ಯವನ್ನು ಜೀವಂತಿಕೆಯನ್ನು ಪಡೆಯುತ್ತದೆ. ಒಂದು ಮಾವಿನ ಹಣ್ಣಿನ ಬೀಜವನ್ನೇ ಹಾಕಿ ಅದು ಮೊಳಕೆ ಒಡೆದು ಸಸಿಯಾಗಿ ನಂತರ ಆ ಸಸಿಯನ್ನು ಕಸಿಗೆ ಒಳಪಡಿಸಿದರೆ ಹೇಗೆ ಹೆಚ್ಚು ಫಲವನ್ನು ಉಣ್ಣಬಹುದೋ ಸಾಹಿತ್ಯವೂ ಕೂಡ ಹಾಗೇ. ಭಾಷೆಯಲ್ಲಿ ಕಸಿಯ ಕಾರ್ಯ ನಡೆದಾಗಲೇ ಫಲದ ಆಸ್ವಾದನೆಯನ್ನು ಸ್ವಾಧಿಸಬಹುದು.

ಸಾಹಿತ್ಯ ತನ್ನ ಕ್ಷೇತ್ರವನ್ನ ಇಂದು ವಿಸ್ತಾರಗೊಳಿಸಿಕೊಂಡಿರುವುದೇ ಓದುಗನ ಆಸ್ಥೆಯಿಂದ. ಹಾಗೂ ಸಾಹಿತಿಯು ಅಭಿವ್ಯಕ್ತಗೊಳಿಸುವ ವಿಷಯಗಳಿಂದ, ಭಾಷೆಯಿಂದ.

ಒಂದು ಭಾಷೆ ಸಾಹಿತ್ಯದ ವಸ್ತು ಸ್ಥಿತಿಯನ್ನೇ ಇಡಿಯಾಗಿ ವಿವರಿಸುತ್ತದೆ. ಇದರ ಮೂಲಧರ್ಮವನ್ನು ಉದ್ದೇಶವನ್ನು ಭಾಷೆಯ ಮೂಲಕ ಅಭಿವ್ಯಕ್ತಗೊಳಿಸುತ್ತದೆ ಎಂಬಂತೆ ಇದಕ್ಕೆ ಪೂರಕವಾಗಿ ಭಾಷೆಯು ಸಹಕರಿಸುತ್ತದೆ. ಒಬ್ಬ ಸೃಜನಶೀಲ ಸಾಹಿತಿಗೆ ಭಾಷೆಯ ಹಿಡಿತವಿದ್ದಾಗಲೇ ಆ ಸಾಹಿತ್ಯವಾಗಲಿ ಅಥವಾ ಕೃತಿಯಾಗಲಿ ಸಹೃದಯನ ಹೃದಯಕ್ಕೆ ಮುಟ್ಟುವುದು. ಹಾಗೂ ಆ ಸಾಹಿತ್ಯಕ್ಕೂ ಬೆಲೆದೊರೆಯುವುದು. ಸಾಹಿತಿ ತನ್ನ ಅಭಿಪ್ರಾಯಗಳನ್ನು ಸಮಾಜಕ್ಕೆ ಸ್ಪುಟವಾಗಿ ತಿಳಿಸಬೇಕಾದರೆ ಭಾಷೆಯ ಅಗತ್ಯತೆ ಅವಶ್ಯಕ.

ಈ ಕಥಾ ಸಂಕಲನದ ಪ್ರತಿಯೊಂದು ಕಥೆಯಲ್ಲಿ ಚಿತ್ತಾಲರು ಭಾಷೆಯ ಮೂಲಕ ತಮ್ಮ ಭಾವನೆಗಳನ್ನು, ಉದ್ದೇಶಗಳನ್ನು ಕಥೆಯಲ್ಲಿನ ಪಾತ್ರಗಳ ಮೂಲಕ ಹಾಗೂ ಭಾಷ್ಯಾಭಿವ್ಯಕ್ತಿಯ ಮೂಲಕ ಬರವಣಿಗೆಯಲ್ಲಿ ಇಳಿಸಿದ್ದಾರೆ. ಈ ಕಥೆಯಲ್ಲಿನ ಪ್ರತಿಯೊಂದು ಪಾತ್ರಗಳಲ್ಲೂ ಜೀವಂತಿಕೆಯನ್ನು ತುಂಬಿ ಕಥೆ ಓದಿದ ನಂತರವೂ ಆ ಪಾತ್ರಗಳು ನಮ್ಮನ್ನು ಕಾಡುತ್ತಲೇ ಇರುತ್ತವೆ. ಇದಕ್ಕೆ ಮುಖ್ಯ ಕಾರಣ ಅವರು ಭಾಷೆಯ ಮೇಲೆ ಹೊಂದಿರುವ ಹಿಡಿತ ಅಥವಾ ಅವರ ಭಾಷಾಭಿವ್ಯಕ್ತತೆ ಎನ್ನಬಹುದು.

ಸಾಹತಿಗಳು ಕೇವಲ ವಿಷಯಗಳನ್ನ ತಿಳಿದಿದ್ದರೆ ಸಾಲದು. ಆ ವಿಷಯಗಳನ್ನ ಸಮಾಜಕ್ಕೆ ತಿಳಿಯಪಡಿಸಬೇಕಾದರೆ ಸಾಹಿತಿಗಳ ಕರ್ತವ್ಯವಾಗಿದೆ. ಅದಕ್ಕೆ ಸಾಹಿತಿಯೂ ಭಾಷಾ ಜ್ಞಾನವನ್ನ ಹೊಂದಿರಬೇಕು. ಉತ್ತಮ ಭಾಷೆ ಹೊಂದಿದ್ದರೆ ಉತ್ತಮ ಕೃತಿಗಳು ಸೃಷ್ಟಿಯಾಗುತವೆ. ಸಮಾಜಕ್ಕೆ ಕೊಡುಗೆಗಳಾಗುತ್ತವೆ. ಅಂತಹ ಕೊಡುಗೆಗೆಳನ್ನು ಸಾಹಿತಿಗಳು ನೀಡುತ್ತಲೇ ಬಂದಿದ್ದಾರೆ.

ಈ ಸಂಕಲನದ ನನ್ನ ಬಹು ಮೆಚ್ಚಿನ ಕಥೆಗಳೆಂದರೆ "ಕಥೆಯಲ್ಲಿ ಬಂದಾತ ಮನೆಗೂ ಬಂದು ಕದ ತಟ್ಟಿದ" ಹಾಗೂ "ತ್ರಯೋದಶ ಪುರಾಣ". ಇವೆರಡೂ ಕಥೆಗಳು ಸಮಾಜಕ್ಕೆ ಏನನ್ನು ಹೇಳಲು ಹೊರಟಿವೆ ಎಂಬುದನ್ನೇ ಚಿತ್ತಾಲರ ಭಾಷಾಭಿವ್ಯಕ್ತದ ಮೂಲಕ ತಿಳಿಯಬಹುದಾಗಿದೆ.

ಸಂಕಲನದ ಮೊದಲ ಕಥೆಯಾದ ಕಥೆಯಲ್ಲಿ ಬಂದಾತ ಮನೆಗೂ ಬಂದ ಕದ ತಟ್ಟಿದ ಕಥೆಯಲ್ಲಿ ವೋಮುವಿನ ಪಾತ್ರ, ವೋಮು ತನ್ನ ಜೋಪಡಿಯ ಜನರ ನ್ಯಾಯಕ್ಕಾಗಿ ಹೋರಾಡಿ ರಾಜಕಾರಣಿಯೊಬ್ಬನ ಸಂಚಿಗೆ ಬಲಿಯಾಗಿ ಕೊನೆಗೆ ಅವನೇ ಕಣ್ಮರೆಯಾಗುವ ದುರಂತ ಕಥೆ. ಈ ಕಥೆಯಲ್ಲಿ ನನ್ನ ಮೆಚ್ಚಿನ ಭಾಗ ಃ " ನೋಡಿ, ಇಲ್ಲಿಯ ಈ ಬಣ್ಣಬಣ್ಣದ ಕುರ್ಚಿಯಲ್ಲಿ ಬೆನ್ನೂರಗಿ ಕೂತಾಗ ತಂಪುಬೆಳಕಿನಲ್ಲಿ ಒಡಮೂಡಿ ಬರುವ ವಾಸ್ತವತೆ ಇದೆಯಲ್ಲ, ಅದರಿಂದ ಬೇರೆಯಾದ ಒಂದು ಲೋಕವಿದೆ. ಸುಡುವ ಬಿಸಿಲಲ್ಲಿ ಬೇಯುತದೆ. ಸುರಿಯುವ ಮಳೆಯಲ್ಲಿ ತೊಯ್ದು ಒದ್ದೆಮುದ್ದೆಯಾಗುತ್ತದೆ. ನಿಮ್ಮನ್ನೇ ಕ್ರಿಯೆಗೆ ಆಹ್ವಾನಿಸುತ್ತದೆ. ಕ್ರಿಯೆಗೆ ಹೆದರಿಕೊಂಡ ಮಾತ್ರಕ್ಕೆ ತಲೆ ಮರೆಯಿಸಿಕೊಳ್ಳಬೇಡಿ. ಕನಿಷ್ಠ ಅಲ್ಲಿ ಒಮ್ಮೆಯಾದರೂ ಬಂದು ಕಣ್ಣುಬಿಟ್ಟು ನೋಡಿ. ಕ್ರಿಯೆಗೆ ಬೇಕಾದ ಧೈರ್ಯ ತಂತಾನೆ ಕುದುರೀತು". ಎನ್ನುತ್ತಿರಬಹುದು ಅಥವಾ ಬಾಯಿಬಿಟ್ಟು ಹೇಳಲು ಆಗದನ್ನೆ ಲಕೋಟೆಯಲ್ಲಿ ಬರೆದಿಟ್ಟು ಹೋಗುತ್ತಿರಬಹುದು. ನನ್ನ ಹಾಗೆ ನೀವೂ ಮೋಸ ಹೋಗಬೇಡಿ. ಕೂಡಲೇ... ಇರಿಸುತ್ತೇನೆ".[೩]

ಈ ವಾಕ್ಯಗಳು ಎಂತಹವರನ್ನೇ ಒಮ್ಮೆ ಆಳವಾಗಿ ಯೋಚಿಸುವಂತೆ ಮಾಡುತ್ತದೆ. ಇಲ್ಲಿ ಅವರು ವ್ಯಕ್ತಪಡಿಸಿರುವ ಭಾವನೆಗಳು ಒಂದೊಂಮ್ಮೆ ಅವರ ಪದಪದದಲ್ಲಿಯೊ ನಮ್ಮನ್ನು  ಹೆದರದೆ ಬನ್ನಿ ಎಂದು, ಅವರೇ ವಿಹರಿಸುತಿರುವ ಲೋಕಕ್ಕೆ ನಮ್ಮನ್ನು ಆಹ್ವಾನಿಸುತಿದ್ದಾರೆ. ಆ ಲೋಕವನ್ನು ನಾವು ಧೈರ್ಯವಾಗಿ ನೋಡುವಂತೆ ತಿಳಿಯಪಡಿಸುತಿದ್ದಾರೆ. ಒಬ್ಬ ಸಾಹಿತಿ ಓದುಗನಿಗೆ ಅವನ ಕೃತಿಗಳು, ಬರವಣಿಗೆಗಳು ಹಾಗು ಕಥೆಗಳಲ್ಲಿನ ಪಾತ್ರಗಳು, ಆ ಪಾತ್ರಗಳ ಹಿಂದಿನ ಉದ್ದೇಶಗಳು ಅವನ ಅಭಿವ್ಯಕ್ತಿ ಪರಿಯೂ ಸಹೃದಯನ್ನನ್ನು ಮುಟ್ಟಿದರೆ ಸಾಹಿತಿ ಗೆದ್ದಂತೆಯೇ ಸರಿ. ಇವೆಲ್ಲವು ಅವರೇ ಅಭಿವ್ಯಕ್ತಗೊಳಿಸಿರುವ ಭಾಷೆಗಳ ಮೂಲಕ ಕಾಣಬಹುದಾಗಿದೆ.

ಇನ್ನೂ ತ್ರಯೋದಶ ಪುರಾಣದ ಗಣೇಶನ ಕಥೆಯಲ್ಲಿ ಗಣೇಶ ಹಾಗೂ ಅವನ ಸ್ನೇಹಿತ ಗೋಪಾಲ, ಇಬ್ಬರು ಕೊನೆಯ ಆಟದ ಸಿನಿಮಾ ನೋಡಿಕೊಂಡು ಬರುತ್ತಾರೆ. ಮಲಗುವ ಸಂದರ್ಭದಲ್ಲಿ ಜಾತಿಯ ವ್ಯವಸ್ಥೆಯನ್ನ ಕುರಿತು ಗೋಪಾಲ ಮಾತಾಡಿದಾಗ ಗಣೇಶನಿಗೆ ತಾನೇನೆಂದು ಉತ್ತರಿಸಬೇಕೆಂಬುದು ತಿಳಿಯದೆ "ಏನೋಪಾ...ನಗೀಗ ಬರೀ ಹದಿಮೂರು ವರ್ಷ ವಯಸ್ಸು" ಎನ್ನುವ ವಾಕ್ಯದಲ್ಲಿ ಗಣೇಶನ ಮುಗ್ಧತೆಯನ್ನ ಹಾಗೂ ಅವನ ನೋವನ್ನ ಕಾಣಬಹುದು.

೩. ಕಥೆಯಾದಳು ಹುಡುಗಿ ಯಶವಂತ ಚಿತ್ತಾಲ, ಪ್ರಿಸಮ್ ಬುಕ್ಸ್ ಹೌಸ್ ಪ್ರೈವೆಟ್ ಲಿಮಿಟೆಡ್, ೨೦೦೯ ಪುಟ ೪೯

ಚಿತ್ತಾಲರು ಇದೊಂದು ವಾಕ್ಯದಲ್ಲಿ ಸಮಾಜದ ಇಡೀ ಜಾತಿ ವ್ಯವಸ್ಥೆಯ ಹಿಂದೆ ಈ ರೀತಿಯ ನೋವಿನ ಸಂಗತಿಯನ್ನ ಕೇವಲ ಒಂದೇ ವಾಕ್ಯದಲ್ಲಿ ಹಿಡಿದಿಟ್ಟಿರುವುದು ಅವರ ಭಾಷಾಕೌಶಲ್ಯದ ಚತುರತೆಗೆ ಸಾಕ್ಷಿಯಾಗಿದೆ ಎನ್ನಬಹುದು.

ಇವೆರಡೂ ಕಥೆಗಳಲ್ಲೂ ಪೋಮು ಬಂಡಾಯಗಾರನಾಗಿ ತಾನು ಅಸ್ಥಿರತೆಯನ್ನು ಕಳೆದುಕೊಳ್ಳುವುದು, ಗಣೇಶನು ಆಸ್ಪತ್ರೆ ಸೇರಿ ಪೋಲೀಸ್ ಅಧಿಕಾರಿಗಳ ಪ್ರಶ್ನೆಗಳಿಗೆ ಉತ್ತರಿಸಲು ಪರೋಕ್ಷವಾಗಿ ಕಾರಣವಾಗುವುದು, ನಮ್ಮ ಜಾತಿ ವ್ಯವಸ್ಥೆಗಳ ಪರಿಸ್ಥಿತಿಯನ್ನು ಚಿತ್ತಾಲರ ಪದಗಳು ಕಟ್ಟಿಕೊಡುತ್ತವೆ.

ಇಲ್ಲಿ ನಾನು ಹೇಳ ಹೊರಟಿರುವುದು ಚಿತ್ತಾಲರ ಭಾಷಾಭಿವ್ಯಕ್ತಿಯ ಮಾಧ್ಯಮ. ಅವರ ಈ ಅಭಿವ್ಯಕ್ತಿ ಮಾಧ್ಯಮ ಸಾಹಿತ್ಯಾಸಕ್ತರನ್ನು ಸೆಳೆಯುತ್ತಿರುವುದರಿಂದಲೇ ಇಂದಿಗೂ ಓದುಗರ ಮನದಲ್ಲಿ ನಿಂತಿರುವುದು. ಇವರ ಕಥೆಗಳಲ್ಲಿ ಪಾತ್ರಗಳು ಮನಸ್ಸಿನಲ್ಲಿ ಅಚ್ಚಳಿಯದೇ ಉಳಿಯುವುದಕ್ಕೇ ಕಾರಣ ಅವರು ಸಾಹಿತ್ಯದ ಮೂಲಕ ಸಮಾಜಕ್ಕೆ ಹೇಳಹೊರಟಿರುವ ವಿಷಯ, ಅಭಿವ್ಯಕ್ತಿಸುವ ತಂತ್ರಗಾರಿಕೆ.

ಸಾಹಿತಿಯು ತನ್ನ ವೈಯುಕ್ತಿಕ ಅಭಿಪ್ರಾಯಗಳನ್ನು, ಭಾವನೆಗಳನ್ನು ಹಾಗೂ ತನ್ನ ಕಲ್ಪನೆಯ ಕಥೆಯ ಜಗತ್ತನ್ನೇ ಬರವಣಿಗೆಯ ರೂಪದಲ್ಲಿಳಿಸಬೇಕಾದರೆ ಅಭಿವ್ಯಕ್ತ ಮಾಧ್ಯಮ ಬಹಮುಖ್ಯವಾದಂತಹುದು. ಸಾಹಿತಿಯು ತನ್ನ ಬರಣಿಗೆಗೆ ಪದಗಳನ್ನು ಪರೀಕ್ಷೆಗೆ (ಓದುಗನಿಗೆ) ಒಡ್ಡಿದಾಗಲೆ ಅವನಿಗೆ ಭಾಷೆಯ ಅವಶ್ಯಕತೆ ಹಾಗೂ ತನ್ನ ಸಾಹಿತ್ಯಕ್ಕೂ ಬೆಲೆದೊರೆಯುವುದು. ಅಲ್ಲದೇ ಸಾಹಿತಿಯು ತನ್ನ ಪ್ರತಿಯೊಂದು ಸಾಹಿತ್ಯದಲ್ಲೂ ಸುಧಾರಣೆಯನ್ನು ಹೊಂದುತ್ತಾ ಬಂದಾಗಲೇ ಯಶಸ್ವಿ ಸಾಹಿತಿಯಾಗಲು ಸಾಧ್ಯ ಹಾಗೂ ಓದುಗನ ಮನಸ್ಸಿನಲ್ಲಿ ಸ್ಥಾನವನ್ನು ಹೊಂದಲು ಸಾಧ್ಯ.

ಚಿತ್ತಾಲರ ಮಾತಿನಂತೆ "ಸಾಹಿತ್ಯ ಕೂಡ ಉಳಿದೆಲ್ಲ ಕಲೆಗಳ ಹಾಗೇ ಅಸಿತ್ವದ ಒಂದು ವಿಶೇಷ ನೆಲೆಯಲ್ಲಿ ಒದಗುವ ವಾಸ್ತವದೊಡನೆಯೆ ಮುಖಾಮುಖಿಯನ್ನ ಸಾಧ್ಯಮಾಡುವ ಅನನ್ಯ ಶಕ್ತಿಯ ಮೂಲಕ ಉಳಿದೆಲ್ಲವುಗಳಿಂದ ಭಿನ್ನವಾಗುತ್ತದೆ"[೪]

ಈ ಹಿನ್ನೆಲೆಯಲ್ಲಿ ಚರ್ಚಿಸಿದರೆ ಸಾಹಿತ್ಯವೆನ್ನುವಂತಹದ್ದು ಬೇರೆ ಮಾಧ್ಯಮಗಳಿಂದ ಹೊರತಾಗಿದೆ. ವ್ಯಕ್ತಿಯೂ ತನ್ನ ತನವನ್ನು ಕಾಣಲು ಸಾಹಿತಿಗಳು ಸೃಷ್ಟಿಸುವ ಪಾತ್ರಗಳು ಸಹಕಾರಿಯಾಗುತ್ತವೆ. ಆ ಪಾತ್ರಗಳ ವ್ಯಕ್ತಿ ಚಿತ್ರಣವನ್ನು ನೀಡಲು ಪದಗಳ ಅವಶ್ಯಕತೆಯಿರುತ್ತದೆ. ಆ ಪದಗಳನ್ನು ನೀಡುವ ಕಾರ್ಯವನ್ನು ಮಾಡುವುದೇ ಭಾಷೆ. ಆ ಭಾವನೆಗಳನ್ನ ಅಭಿವ್ಯಕ್ತಿಸುವುದೇ ಭಾಷಾಭಿವ್ಯಕ್ತಿ. ಅದುವೇ ಸಾಹಿತಿಯ ಕಾರ್ಯ ಹಾಗೂ ನಿಯಮಕೂಡವಾಗಿರಬಹುದು. ವ್ಯಕ್ತಿಯಲ್ಲಿ ನೆಲೆನಿಂತಿರುವ ಭಾವನೆಗಳು ಮತ್ತು ಆಸೆಗಳೆಲ್ಲವು, ನಾಟಕ, ಸಿನಿಮಾಗಳನ್ನ ಬಿಟ್ಟರೆ ನಂತರ ಸ್ಥಾನ ಸಾಹಿತ್ಯಕ್ಕೆ.

---

೪. ಸಾಹಿತ್ಯದ ಸಪ್ತಧಾತುಗಳು – ಯಶವಂತ ಚಿತ್ತಾಲ ಧರಣಿ ಪ್ರಿಂಟರ್ಸ್, ಬೆಂಗಳೂರು – ೧೦, ೨೦೧೦ ಪುಟ ೩೦

ಈ ಸಂಕಲನದಲ್ಲಿ ಮೂಡಿಬಂದಿರುವ ಎಂಟು ಕಥೆಗಳಲ್ಲಿ ಚಿತ್ತಾಲರ ಭಾಷಾ ಪ್ರಯೋಗವನ್ನ ಗಮನಿಸಬಹುದು. ಓದುಗನ್ನನ್ನು ಸಾಕ್ಷಿಯಲ್ಲಿಡುವಂತೆ ಓದುಗನಿಗೇ ಕಥೆಯ್ನನ್ನು ವಿವರಿಸಲಾಗುತ್ತದೆ. ಉದಾಹರಣೆ ಮೊದಲ ಕಥೆಯಲ್ಲಿ 'ಕಥೆಯಲ್ಲಿ ಬಂದಾತ ಮನೆಗೂ ಬಂದು ಕದ ತಟ್ಟಿದ" ಕಥಾ ವಿಭಾಗದಲ್ಲಿ "ಬನ್ನಿ ಕುಳಿತುಕೊಳ್ಳಿ ಒಂದು ಕಥೆ ಹೇಳುತ್ತೇನೆ. ನೀವೆಲ್ಲ ಇದನ್ನು ಕೇಳಬೇಕು ಅನ್ನಿಸಿದ್ದರಿಂದಲೇ ಹೇಳುತ್ತಿದ್ದೇನೆ..."[೫] ಎಂದು ಪ್ರಾರಂಭಿಸುವ ಚಿತ್ತಾಲರು ಓದುಗರನ್ನ ಆಹ್ವಾನಿಸಿದರೂ ನಂತರ ಕಥೆಯನ್ನು ಓದುತ್ತಾ ಓದುತ್ತಾ ಅದರಲ್ಲೇ ನಮ್ಮನ್ನು ಒಂದು ಪಾತ್ರವಾಗುವಂತೆ ಮಾಡಿರುತ್ತಾರೆ. ಇವರ ಈ ಕಥಾ ರಚನೆಯ ಅಭಿವ್ಯಕ್ತಿ ಕೌಶಲ್ಯವೇ ಈ ರೀತಿ ಓದುಗರನ್ನೇ ಹಿಡಿದಿಟ್ಟಿರುವುದಕ್ಕೆ ಸಾಕ್ಷಿಯಾಗಿದೆ.

ಪ್ರಸ್ತುತ ಸಮಾಜದ ಸಮಸ್ಯೆಗಳನ್ನು ಹಾಗೂ ಅವರ ಅನುಭವಕ್ಕೆ ಬಂದಂತಹ ಘಟನೆಗಳನ್ನು ಸಮಾಜಕ್ಕೆ ಸಾಹಿತ್ಯದ ಮೂಲಕ ವ್ಯಕ್ತಪಡಿಸಲು ಅಥವಾ ಎಚ್ಚತ್ತುಕೊಳ್ಳುವಂತೆ ಹೇಳಲು ಅವರು ಆಯ್ಕೆಮಾಡಿಕೊಂಡಿರುವ ಕ್ಷೇತ್ರವೇ ಸಾಹಿತ್ಯಕ್ಷೇತ್ರ. ಅವರ ಈ ಅಭಿಪ್ರಾಯಗಳನ್ನು ಅವರೇ ರಚಿಸಿರುವ ಕಥೆಗಳ ಮೂಲಕ ಕಾಣಬಹುದು. ಇಂತಹ ನಿದರ್ಶನಗಳನ್ನ ಅವರ ಕೃತಿಗಳ ಮೂಲಕ ಕಥೆಗಳ ಮೂಲಕ ಅಭಿವ್ಯಕ್ತಗೊಳಿಸುವ ವಸ್ತು ವಿಷಯಗಳ ಮೂಲಕ ತಿಳಿಯಬಹುದಾಗಿದೆ. ಅಲ್ಲದೆ ಓದುಗನು ತಾನು ಓದಿರುವ ಕಥೆಗಳ ಮೂಲಕವಾದರೂ ತನ್ನಲ್ಲಿರುವ ಋಣಾತ್ಮಕ, ಅಂಶಗಳನ್ನು ಬದಲಾಯಿಸಿ ನೈತಿಕ ಮೌಲ್ಯಗಳಿಂದ ಬದುಕಿ ಜೀವನವದ ನಿಜವಾದ ಸಾರವನ್ನು ತಿಳಿಯಬೇಕೆಂಬುದನ್ನು ಇವರ ಕಥೆಗಳ ಭಾಷಾಭಿವ್ಯಕ್ತದ ಮೂಲಕ ತಿಳಿಯಬಹುದು.

ಇವರ ಈ ಕಥನಾ ಕೌಶಲ್ಯವು ಸಾಮಾನ್ಯ ಓದುಗನೂ ಅರ್ಥೈಸಿಕೊಳ್ಳುವಂತಹ ಭಾಷಾಭಿವ್ಯಕ್ತಿ ಸಾಮಾರ್ಥ್ಯವನ್ನ ಒಳಗೊಂಡಿವೆ.

ಟಿ.ಪಿ.ಅಶೋಕರವರು ಚಿತ್ತಾಲರ ಭಾಷಾಭಿವ್ಯಕ್ತಿಯನ್ನ ಹೇಳುತ್ತಾ "ಸಾಮಾನ್ಯ ಓದುಗನ ಗ್ರಹಿಕೆಗೆ ಅಗಮ್ಯವಾದುದೇನೂ ಈ ಕಥೆಗಳಲ್ಲಿ ಇರುವುದಿಲ್ಲ. ಆದರೆ ಸಮಷ್ಟಿಯೆ ನೋವಿನಲ್ಲಿ ಓದುಗರನ್ನು ಪಾಲುದಾರರನ್ನಾಗಿ ಮಾಡಿ ನೋವಿನ ಮೂಲಕವೇ ಕಥೆಗಾರ ತನ್ನ ವಿಮೋಚನೆಯನ್ನು ಕಂಡುಕೊಳ್ಳುವ ಈ ಕಥೆಗಳನ್ನು ಓದುವುದರ ಮೂಲಕ ಓದುಗರು ತಮ್ಮ ತಮ್ಮ ವಿಮೋಚನೆಯನ್ನ ಕಂಡುಕೊಳ್ಳುತ್ತಾ ಹೋಗುತ್ತಾರೆ.[೬]

ಕೊನೆಯದಾಗಿ ಭಾಷಾಭಿವ್ಯಕ್ತಿ ಎನ್ನುವುದ ಮನುಷ್ಯನ ಭಾವನೆಗಳಿನ್ನ ಅಭಿವ್ಯಕ್ತಿಗೊಳಿಸಲು ಕಂಡುಕೊಂಡಿರುವ ಒಂದು ಸಂವಹನ ಮಾಧ್ಯಮ. ಪ್ರಪಂಚವು ಮುಂದುವರೆದಂತೆಲ್ಲ ಭಾಷೆಯಲ್ಲಿ ಅನೇಕ ಬದಲಾವಣೆಗಳಾಗಿ ಇಂದು ಮಾನವನು ಭಾಷೆ ಇಲ್ಲದೇ ಬದುಕಲು ಸಾಧ್ಯವಿಲ್ಲ. ಅಂತಹ ಭಾಷೆಯನ್ನು ಸಾಹಿತ್ಯದಲ್ಲಿ ಅಭಿವ್ಯಕ್ತಗೊಳಿಸುವುದು ಒಂದು ಕಲೆಗಾರಿಕೆಯ ಸರಿ.

---

೫. "ಕಥೆಯಾದಳು ಹುಡುಗಿ" ಯಶವಂತ ಚಿತ್ತಾಲ, ಪ್ರಿಸಮ್ ಬುಕ್ ಹೌಸ್, ಬೆಂಗಳೂರು - ೨೦೦೯ - ಪುಟ ೩೦

೬. ಸಾಹಿತ್ಯ ಸಂಪರ್ಕ,ಟಿ.ಪಿ. ಅಶೋಕ, ೧೯೮೬, ಪುಟ-೫೦

ಅಂತಹ ಭಾಷಾಭಿವ್ಯಕ್ತಿಯ ಕಲೆಗಾರಿಕೆಯನ್ನ ಹೊಂದಿದವರು ಯಶವಂತ ಚಿತ್ತಾಲರು. ಚಿತ್ತಾಲರು ಹೇಳ ಬಯಸುವ ಭಾವನೆಗಳು ಭಾಷಾಭಿವ್ಯಕ್ತಿಯ ಮೂಲಕ ಹೊರಚೆಲ್ಲಿ ಸಾಮಾನ್ಯ ಜನರನ್ನು ಕ್ರಮಿಸುವಂತಹ ಅವರ ಭಾವನೆಗಳನ್ನು ತಟ್ಟುವಂತಹ ಅಭಿವ್ಯಕ್ತಶೀಲ ಮಾಧ್ಯಮವನ್ನು ಚಿತ್ತಾಲರು ಹೊಂದಿದ್ದಾರೆ.

ಸಾಹಿತ್ಯಾಸಕ್ತರನ್ನು ಕೇವಲ ಶಬ್ದಗಳ ಮೂಲಕ ಆಕರ್ಷಿಸಲು ಸಾಧ್ಯವಿಲ್ಲ. ಅದಕ್ಕೆ ಒಂದು ಕಲೆಗಾರಿಕೆಯ ತಂತ್ರದ ಅವಶ್ಯಕತೆಯಿದೆ. ಅಂತಹ ತಂತ್ರಗಾರಿಕೆಯ "ಅಭಿವ್ಯಕ್ತಿ" ಮಾಧ್ಯಮ ಅದು ಚಿತ್ತಾಲರ ಕಥೆಗಳಲ್ಲಿ ಸಮರ್ಥವಾಗಿ ಅಭಿವ್ಯಕ್ತವಾಗಿದೆ ಎನ್ನಬಹುದು.

ಅಡಿಟಿಪ್ಪಣಿ

೧. ಸಾಹಿತ್ಯ ಸೃಜನಶೀಲತೆ ಮತ್ತು ನಾನು – ಯಶವಂತ ಚಿತ್ತಾಲ
ಸಾಮಾನ್ಯ ಭಾಷೆ ಕಾವ್ಯ ಭಾಷೆ – ಜ್ಯೋತಿಷ್ಮತಿ ಪ್ರಕಾಶನ, ಅಜ್ಜರ ಕಾಡು
ಉಡುಪಿ, ೧೯೯೩ ಪುಟ ೯೯

೨. ಸಾಹಿತ್ಯ ಸೃಜನಶೀಲತೆ ಮತ್ತು ನಾನು – ಯಶವಂತ ಚಿತ್ತಾಲ
ಸಾಮಾನ್ಯ ಭಾಷೆ ಕಾವ್ಯ ಭಾಷೆ – ಜ್ಯೋತಿಷ್ಮತಿ ಪ್ರಕಾಶನ, ಅಜ್ಜರ ಕಾಡು
ಉಡುಪಿ, ೧೯೯೩ ಪುಟ ೧೦೧

೩. "ಕಥೆಯಾದಳು ಹುಡುಗಿ" ಯಶವಂತ ಚಿತ್ತಾಲ
ಪ್ರಿಸಮ್ ಬುಕ್ ಹೌಸ್, ಬೆಂಗಳೂರು – ೨೦೦೯ – ಪುಟ ೪೯

೪. ಸಾಹಿತ್ಯದ ಸಪ್ತಧಾತುಗಳು – ಯಶವಂತ ಚಿತ್ತಾಲ ಧರಣಿ ಪ್ರಿಂಟರ್ಸ್
ಬೆಂಗಳೂರು – ೧೦, ೨೦೧೦ ಪುಟ ೩೦

೫. "ಕಥೆಯಾದಳು ಹುಡುಗಿ" ಯಶವಂತ ಚಿತ್ತಾಲ
ಪ್ರಿಸಮ್ ಬುಕ್ ಹೌಸ್, ಬೆಂಗಳೂರು – ೨೦೦೯ – ಪುಟ ೩೦

೬. ಸಾಹಿತ್ಯ ಸಂಪರ್ಕ– ಟಿ.ಪಿ. ಅಶೋಕ ೧೯೮೬ ಪುಟ ೫೦

# ಅಧ್ಯಾಯ – ೪
# ಸಂಕಲನದ ಕ್ರಾಂತಿಕಾರಿ ಧೋರಣೆಯ ಅಭಿವ್ಯಕ್ತಿ ಚಿತ್ರಣ

ಮಾನವನು ಜೀವಿಸುತ್ತಿರುವುದು ಇಪ್ಪತ್ತೊಂದನೆಯ ಶತಮಾನದಲ್ಲಿ. ಈ ಶತಮಾನವು ವೈಜ್ಞಾನಿಕ ಯುಗವಾಗಿದೆ. ಈ ಯುಗವನ್ನು ಮಾಯಜಾಲದ ಯುಗವೆಂದು ಹೇಳಿದರೆ ತಪ್ಪಾಗುವುದಿಲ್ಲ. ಅಷ್ಟರಮಟ್ಟಿಗೆ ತಂತ್ರಜ್ಞಾನ ಕ್ಷೇತ್ರದಲ್ಲಿ ಬದಲಾವಣೆಗಳಾಗಿವೆ.

ಇಂದು ನಾವು ಕಾಣುತ್ತಿರುವ ಹೊಸ-ಹೊಸ ವಿಷಯಗಳೆಲ್ಲವು ಮಾನವನ ಅದ್ಭುತ ಸಾಧನೆಯೆ ಸರಿ. ಇವೆಲ್ಲವು ಒಂದು ದಿನದಲ್ಲಾಗಲಿ, ಗಳಿಗೆಯಲ್ಲಾಗಲಿ ಸೃಷ್ಟಿಯಾದದ್ದಲ್ಲ. ಒಂದು ರೀತಿಯ ಕ್ರಾಂತಿಕಾರಿಯ ಪರಿಣಾಮದಿಂದ ಹಲವಾರು ಕ್ರಿಯೆಗಳಿಗೆ – ಪ್ರಕ್ರಿಯೆಗಳಾಗಿ, ಧೋರಣೆಗಳಿಗೆ – ಪ್ರತಿಧೋರಣೆಗಳಾಗಿ, ಇಂದು ಉಂಟಾದ ಬದಲಾವಣೆಗಳು ಹಾಗೂ ಸ್ವರೂಪಗಳು.

ಸಮಾಜದಲ್ಲಿ ಯಾವುದೇ ವಿಷಯಗಳನ್ನು ತೆಗೆದುಕೊಂಡರೂ ಅವುಗಳಲ್ಲಿ ಪರ ಹಾಗು ವಿರೋಧ, ಒಳ್ಳೆಯದು ಹಾಗೂ ಕೆಟ್ಟದ್ದು, ಬೇಕು – ಬೇಡ ಎನ್ನುವ ವಿಚಾರಗಳು ನಡೆಯುತ್ತಲೇ ಇವೆ. ಇಲ್ಲಿ ನಮ್ಮ ಆಯ್ಕೆಯೂ ಬಹಳ ಮುಖ್ಯ. ಮನುಷ್ಯನಾದವನು ಯಾವಾಗಲೂ ಒಳ್ಳೆಯ ವಿಚಾರಗಳಿಗೆ ಮನಸೋತು, ಯೋಚನೆ ಮಾಡಿ, ಒಳ್ಳೆಯದನ್ನೇ ಆಯ್ಕೆಮಾಡಿಕೊಳ್ಳಬೇಕು. ಒಳ್ಳೆಯ ವಿಚಾರಗಳಿಗೆ ಬೆಂಗಾವಲಾಗಿ ನಿಲ್ಲಬೇಕು.

ಇಂದಿನ ನಮ್ಮ ಸಮಾಜದಲ್ಲಿ ಭ್ರಷ್ಟಾಚಾರವೆನ್ನುವುದು ತಾಂಡವವಾಡುತ್ತಿದೆ. ನ್ಯಾಯ-ಧರ್ಮಗಳ ನೆರಳಿನಲ್ಲಿ ಹೋಗಬೇಕಾದ ಮಾನವ ಅನ್ಯಾಯ, ಅಕ್ರಮ ಹರಾಜಕತೆಗಳ ಹಿಂದೆ ಓಡುತ್ತಿದ್ದಾನೆ. ನಾನು, ನನ್ನದು ಎನ್ನುವ ಅಹಂಭಾವದಲ್ಲಿ ನಿಜವಾದ ಮಾನವೀಯತೆಯನ್ನು ಮರೆತಿದ್ದಾನೆ. ಇವೆಲ್ಲವು ಸಮಾಜಕ್ಕಂಟಿರುವ ರೋಗಗಳು. ಈ ರೋಗವನ್ನು ಬುಡಸಮೇತ ಕಿತ್ತುಹಾಕಬೇಕಾದರೆ, ಅದಕ್ಕೆ ಸಮಾಜದಲ್ಲಿನ ವ್ಯಕ್ತಿಗಳಲ್ಲಿ ಮನಃಪರಿವರ್ತನೆಯಾಗಬೇಕು. ಅಂಗುಲೀಮಾಲನನ್ನು ಮನ:ಪರಿವರ್ತಿಸಿದಂತೆ ಸಾಹಿತಿಗಳು ಬುದ್ಧರಾಗಿ ಅವರ ಭಾವನೆಗಳನ್ನು ತತ್ವಗಳಾಗಿ ನರಭಕ್ಷಕ(ಹಣಭಕ್ಷಕ) ಭ್ರಷ್ಟರಿಗೆ ಅರ್ಥವಾಗುವಂತೆ, ಮನಮುಟ್ಟುವಂತೆ ತಿಳಿಯಪಡಿಸಬೇಕು. ಅದುವೇ ಸಾಹಿತಿಗಳು ಸಮಾಜಕ್ಕೆ ನೀಡುವ ಕೊಡುಗೆಗಳು. ಈ ಭ್ರಷ್ಟ ಸಮಾಜವನ್ನು ನಿರ್ಮೂಲನ ಮಾಡಬೇಕಾದರೆ ಕ್ರಾಂತಿಗಳಾಗಬೇಕು. ಪ್ರತಿಯೊಬ್ಬರಲ್ಲೂ "ಕ್ರಾಂತಿಕಾರಿ" ಧೋರಣೆಯ ವಿಚಾರಗಳಿರಬೇಕು.

ಕ್ರಾಂತಿಕಾರಿ ಎನ್ನುವ ಪದದಲ್ಲೇ ಕಿಚ್ಚು, ಸಿಡಿದೇಳು, ಬಡಿದೆಬ್ಬಿಸು ಇತ್ಯಾದಿ ಅರ್ಥಗಳನ್ನು ಕಾಣಬಹುದು. ಮಾವನಲ್ಲಿಯ ಈ ಧೋರಣೆಗಳು ಸಮಾಜಕ್ಕೆ ಉಪಯೋಗವಾಗಬೇಕು.

ಅದರಲ್ಲೂ ಸಮುದಾಯದ ಉದ್ಧಾರಕ್ಕೆ, ಏಳ್ಗೆಗೆ, ಅಭಿವೃದ್ಧಿಗೆ ಬಳಸಬೇಕು. ಈ ಕ್ರಾಂತಿಕಾರಿಯ ಅಂಶಗಳನ್ನು ನಾವು ಚಿತ್ತಾಲರ ಕಥೆಗಳಲ್ಲಿ ಕಾಣಬಹುದು. ಇವರ ಬಹು ಕೃತಿಗಳಾಗಲಿ, ಕಥೆಗಳಾಗಲಿ ಸಮಾಜಕ್ಕೆ ಸಂದೇಶವೊಂದನ್ನ ನೀಡುವ ವಸ್ತು ವಿಷಯಗಳಾಗಿರುತ್ತವೆ. ಆದ್ದರಿಂದಲೇ ಇಂದಿಗೂ ಇವರ ಕಥೆಗಳು ಜನ-ಮನದಲ್ಲಿ ಉಳಿದಿವೆ.

ಈ ಸಂಕಲನದ "ಕಥೆಯಲ್ಲಿ ಬಂದಾತ ಮನೆಗೂ ಬಂದು ಕದ ತಟ್ಟಿದ" ಕಥೆಯು ಒಬ್ಬ ಬಂಡಾಯಗಾರನ ಕಥೆ. ಹರಿಜನ ಹುಡುಗನೊಬ್ಬ ತನ್ನ ಜನರ ನ್ಯಾಯಕ್ಕಾಗಿ ಹೋರಾಡಿ, ರಾಜಕಾರಣೀಯೊಬ್ಬನ ಕುತಂತ್ರಕ್ಕೆ ಬಲಿಯಾಗುತ್ತಾನೆ.

ಒಂದು ಸಮುದಾಯದ ಜವಾಬ್ದಾರಿಯುತ ವ್ಯಕ್ತಿ ತನ್ನ ಜನರಿಗಾಗಿ ಅಥವಾ ಸಮುದಾಯಕ್ಕಾಗಿ, ಜೀವವನ್ನು ಲೆಕ್ಕಿಸದೆ ನ್ಯಾಯಕ್ಕಾಗಿ ಹೋರಾಡುತ್ತಾನೆ. ಆದರೆ ಅದೇ ಜನರ ಕುತಂತ್ರಕ್ಕೆ ಬಲಿಯಾಗುವಾಗ, ಒಂದೊಮ್ಮೆ ನಮ್ಮನ್ನು ನಾವು ಪ್ರಶ್ನಿಸಿಕೊಳ್ಳಬೇಕಾಗುತ್ತದೆ.

ಈ ಕಥೆಯಲ್ಲಿ ಹರಿಜನ ಹುಡುಗ ಒಬ್ಬ ಪಾತ್ರವಾದರೂ, ಅವನ ಹಿಂದೆ ನಡೆದ ವಿಚಾರವನ್ನು ನಾವು ಸೂಕ್ಷ್ಮವಾಗಿ ಗಮನಿಸಬೇಕು. ಅವನಲ್ಲಿಯ ಕಿಚ್ಚು, ನ್ಯಾಯಪರತೆ, ತನ್ನ ಜನರಿಗಾಗಿ ಹಾಗೂ ಅವರ ಸ್ಥಾನಮಾನಗಳಿಗಾಗಿ ಹೋರಾಡುವ ಕಿಡಿ, ಕ್ರಾಂತಿಯ ಅಂಶಗಳಾದರು, ದುಷ್ಟ ಜನರ ನಿಕೃಷ್ಟ ಬುದ್ಧಿಯಂದ ಅವನ ಕಣ್ಮರೆಯಾಗುವುದು. ಇದು ಓದುಗನನ್ನು ನಮ್ಮ ಸಮಾಜದ ಪರಿಸ್ಥಿತಿಯನ್ನು ಚಿಂತಿಸುವಂತೆ ಮಾಡುತ್ತದೆ.

"ನಿಮ್ಮ ಗೆಳೆಯರಲ್ಲಿ ಒಬ್ಬನಿಗೂ ಮಗೂನ ನೆನಪೇ ಆಗಬಾರದ ಹಾಗೆ ಅದೆಂತ ಕಥೆ ಬರೆದಿರೋ, ಅವಳ ಬಗ್ಗೆ ಕಥೆ ಬರೆಯುತ್ತೇನೆ... ಬೆಂಕಿ ಬಿತ್ತು ನಿಮ್ಮ ಸಾಹಿತ್ಯಕ್ಕೆ .... ಸುಟ್ಟುಹಾಕಿ.... ಇನ್ನೆಂದಾದರೂ ಕಥೆ ಬರೆದಿರಾ. ಮಗುವಿನ ಆಣೆಯಿದೆ ನಿಮಗೆ...."[೧]

ಈ ಸಂಕಲನದ ಅದ್ಭುತ ಕಥೆ ಹಾಗು ಜನಮೆಚ್ಚುಗೆ ಪಡೆದ ಕಥೆಯ ಸಾಲುಗಳು. ಸಮಾಜ, ಸಮಾಜದ ಜನರನ್ನು, ಸಮಾಜ ವ್ಯವಸ್ಥೆಯನ್ನು ಚಿತ್ರಿಸುತ್ತಾ, ತಾಯಿಯ ಮಮತೆ, ಕರುಣೆ, ನೋವಿನ ಚಿಂತನೆಯ ಚಿತ್ರಣವಿದೆ. ಆ ನೋವಿನ ಚಿಂತನೆಯಲ್ಲಿ ತಾಯಿಯ ಹೃದಯದಲ್ಲೂ ಕ್ರಾಂತಿಕಾರಿ ಧೋರಣೆಯ ಭಾವನೆಯಿರುವುದನ್ನು ಕಾಣಬಹುದು.

ಭಾರತ ದೇಶವು ವೇದ-ಪುರಾಣಗಳ, ದೈವ ನಂಬಿಕೆಗಳ ಶಾಸ್ತ್ರ-ಸಂಪ್ರದಾಯಗಳ ಚರಿತ್ರೆಯನ್ನು ಹೊಂದಿರುವ ರಾಷ್ಟ್ರ. ಈ ನಮ್ಮ ರಾಷ್ಟ್ರದಲ್ಲಿ 'ಪತಿಯೆ ಪ್ರತ್ಯಕ್ಷ ದೈವವೆಂದು ನೆನೆಯುವ ನಮ್ಮ ದೇಶದ ನಾರಿಮಣಿಗಳಿಗೆ ಗಂಡನೆ ದೇವರು. ಗಂಡನ ಶ್ರೇಯಸ್ಸು, ಏಳ್ಗೆಯೇ ಹೆಂಡಿತಿಯೊಬ್ಬಳ ಸಂತೋಷ. ಗಂಡನ ಯಶಸ್ಸು, ಕೀರ್ತಿ, ಪ್ರತಿಷ್ಠೆಗಳ ಮುಂದೆ ಬೇರೆ ಯಾವುದರ ಕಲ್ಪನೆ ಇರದ ಹೆಣ್ಣುಬ್ಬೊಳಿಗೆ ತನ್ನ ಗಂಡನಿಂದಲೇ ನನ್ನ ಮಮತೆಗೆ ಲೋಪವಾಗಿರುವುದನ್ನು ನೆನೆದು ದುಃಖಿಸಿ ಸಿಡಿದೇಳುವ ಮೂಲಕ ತನ್ನ ಭಾವನೆಗಳನ್ನು ವ್ಯಕ್ತಪಡಿಸಿದ್ದಾಳೆ.

---

೧. "ಕಥೆಯಾದಳು ಹುಡುಗಿ" ಯಶವಂತ ಚಿತ್ತಾಲ, ಪ್ರಿಸಮ್ ಬುಕ್ ಹೌಸ್, ಬೆಂಗಳೂರು – ೨೦೦೯ – ಪುಟ–

ಇಲ್ಲಿ ಹೆಣ್ಣೊಬ್ಬಳು ತಾನು ಹೆಂಡತಿ ಅನ್ನವುದಕ್ಕಿಂತ ಹೆಚ್ಚಾಗಿ ತನ್ನ ಮಗುವಿಗಾಗಿರುವ ಅನ್ಯಾಯವನ್ನು ತನ್ನ ಗಂಡ ಎನ್ನುವುದನ್ನ ಬದಿಗಿಟ್ಟು ಸಿಡಿದೇಳುವ, ಕ್ರಾಂತಿಯ ಭಾವನೆಯನ್ನು ಚಿತ್ತಾಲರು ಇಲ್ಲಿ ತೋರಿಸಿದ್ದಾರೆ. ಇಲ್ಲಿ ಕೇವಲ ತಾಯಿಯ ಪ್ರೀತಿಯನ್ನು, ಮಮತೆಯನ್ನು ಕ್ರಾಂತಿಯ ಮೂಲಕ ಮಾತ್ರ ನೋಡದೆ, ಲೇಖಕರ ಹೆಂಡತಿ ಆ ರೀತಿ ಪದ (ಸುಟ್ಟುಹಾಕಿ) ಪ್ರಯೋಗ ಮಾಡಲು ಕಾರಣವಾಗಿರುವ ಪರಿಸ್ಥಿತಿಯನ್ನ ನಾವು ಕಥೆಯಲ್ಲಿ ಕಾಣಬಹುದು.

ಸ್ನೇಹಿತರು ಲೇಖಕರಿಗೆ ಬಂದಿರುವ ಸನ್ಮಾನವನ್ನು ಪ್ರಶಂಸಿಸಿ, ಮೋಜು ಮಸ್ತಿಯಲ್ಲಿರುವವರಿಗೆ, ಹದಿಮೂರು ವರುಷದ ಬಾಲಕಿಯ ಮೇಲೆ ನಡೆದಿರುವ ಅತ್ಯಾಚಾರ ಕಲ್ಪನೆಯ ಇರದ, ಇಂತಹ ದುಷ್ಟ ಜನರ ವಿರುದ್ಧ ಸಿಡಿದೆದ್ದಿರುವುದೇ ಲೇಖಕರ ಹೆಂಡತಿಯ ಕ್ರಾಂತಿಯ ಭಾವನೆಗಳು.

ಇನ್ನು "ತ್ರಯೋದಶ ಪುರಾಣ"ದಲ್ಲಿನ ಕಥೆಯಲ್ಲಿ ಗೋಪಾಲನು ಉಪಯೋಗಿಸಿರುವ ವಾಕ್ಯ "ದುಷ್ಟರು–ಶುದ್ಧ" ಬ್ರಾಹ್ಮಣ ಸೂಳೆಮಕ್ಕಳು' [೨] ಎನ್ನುವಂತಹದ್ದು ಜಾತಿ ವ್ಯವಸ್ಥೆಯಿಂದ ನೊಂದ ಹುಡುಗನೊಬ್ಬನ ಆಕ್ರಂದನ ಎಂದು ಹೇಳಿದರೆ ತಪ್ಪಾಗುವುದಿಲ್ಲ.

ನಮ್ಮ ಸಮಾಜದ ಜಾತಿವ್ಯವಸ್ಥೆಯಿಂದ ಈ ರೀತಿಯ ಆಕ್ರಂದನಗಳನ್ನು, ನೋವುಗಳನ್ನು ನಾವು ಕಾಣಬಹುದಾಗಿದೆ. ಬಹುಶಃ ಗೋಪಾಲ ಗಣೇಶನ ಮೇಲೆ ಪ್ರಯೋಗಿಸುವ ವಾಕ್ಯ ಪ್ರಯೋಗವೇ ಗೋಪಾಲನ ತಂದೆ ಜಾತಿಗಳಿಂದ, ಕುರುಡು ಸಂಪ್ರದಾಯಗಳ ಆಚರಣೆಯಿಂದ ಅನುಭವಿಸಿರುವ ಘಟನೆಗಳೇ ಕಾರಣವಿರಬಹುದು.

ಈ ಕಥೆಯ ಸೃಷ್ಟಿಯ ಕಾಲ ೭೦–೮೦ ರ ದಶಕದಲ್ಲಾದದ್ದು. ಅಂದಿನ ಸಮಾಜ, ಸಮುದಾಯದ ವ್ಯವಸ್ಥೆ, ಸಂಪ್ರದಾಯ, ರೀತಿ–ರೀವಾಜುಗಳು ಇವೆಲ್ಲವು ನಮ್ಮನ್ನು ಆ ಕಾಲಕ್ಕೆ ಕೊಂಡೊಯ್ದು ಒಮ್ಮೆಲೆ ಚಿಂತಿಸುವಂತೆ ಮಾಡುತ್ತವೆ.

ಇಲ್ಲಿ ಗೋಪಾಲ ಕೇವಲ ಕಥೆಯಲ್ಲಿನ ಪಾತ್ರ, ಆದರೆ ನಾನು(ವಿದ್ಯಾರ್ಥಿನಿ) ಜೀವಂತ. ಈ ಜಾತಿ ವ್ಯವಸ್ಥೆಯಿಂದ ಅನುಭವಿಸಿದ್ದು ಕೇವಲ ಪದಗಳಲ್ಲಾಗಲಿ, ಬರವಣಿಗೆಯಲ್ಲಾಗಲಿ ವ್ಯಕ್ತಪಡಿಸಲು ಸಾಧ್ಯವಿಲ್ಲ.

ನನಗೆ ಸುಮಾರು ೧೦–೧೧ನೇ ವಯಸ್ಸಿನಲ್ಲಿ ಹುಷಾರಿಲ್ಲದ ಕಾರಣ ಶಾಲೆಗೆ ಎರಡು ದಿನ ಹಾಜರಾಗಿರಲಿಲ್ಲ. ಅಂದಿನ ಪಾಠದ ವಿಷಯಗಳನ್ನು ತೆಗೆದುಕೊಳ್ಳಲು ತಾಯಿಯೊಂದಿಗೆ ನನ್ನ ಸ್ನೇಹಿತಳ ಮನೆಗೆ ಹೋದೆ. ಆದರೆ ಅವಳ ಮನೆಯ ಒಳಗೆ ಹೋದಾಗ ಎಲ್ಲಿಂದಲೋ ಬಂದಂತಹ ದೊಡ್ಡಗಾತ್ರದ ದೇಹ (ತಾಯಿ) ನನ್ನನ್ನ ಹೊರ ಹೋಗಲು ಹೇಳಿತು. ಆಗೆ ಹೇಳಲು ಕಾರಣ ಅವರು ಬ್ರಾಹ್ಮಣರು. ಬ್ರಾಹ್ಮಣದ ಸಂಪ್ರದಾಯಗಳು ಹಾಗೂ ಅಂದಿನ ನಮ್ಮ ಜಾತಿ ವ್ಯವಸ್ಥೆ, ಇದು ನಡೆದು ೨೦ವರ್ಷಗಳಾದರೂ ಇಂದಿಗೂ ಈ ಘಟನೆ ನನ್ನ ಸ್ಮೃತಿ ಪಟಲದಿಂದ ಮಾಸಳಿಯದೇ ಹಾಗೇ ಉಳಿದಿದೆ. ಈ ಕಥೆಯನ್ನು ಓದುತ್ತಿರುವಾಗ ನನ್ನ ಮನಸ್ಸು ಅಂದಿನ ದಿನಗಳನ್ನು ಮರುಕಳಿಸುತ್ತಿತ್ತು. ನಾನು ಪಟ್ಟಂತಹ ಮನವೇದನೆಯ ಚಿತ್ರಣವನ್ನು ಈ ಕಥೆ ಮತ್ತೆ ನೀಡಿತು.

---

೨. "ಕಥೆಯಾದಳು ಹುಡುಗಿ" ಯಶವಂತ ಚಿತ್ತಾಲ, ಪ್ರಿಸಮ್ ಬುಕ್ ಹೌಸ್, ಬೆಂಗಳೂರು – ೨೦೦೯ – ಪುಟ–

ಇಲ್ಲಿ ಗೋಪಾಲನ ತಂದೆಗೆ ಬಹುಶಃ ಜಾತಿ ವ್ಯವಸ್ಥೆಯಿಂದ ಆದ ಕಹಿ ಅನುಭವಗಳೇ ಗೋಪಾಲನನ್ನು ಆ ರೀತಿ ಮಾತನಾಡಲು ಪ್ರೇರೇಪಿಸಿರಬಹುದು. ಇದನ್ನು ಇನ್ನು ಸೂಕ್ಷ್ಮವಾಗಿ ಗಮನಿಸಿದರೆ ಗೋಪಾಲನ ಎದೆಯಲ್ಲಿ ಹಚ್ಚೆ ಉರಿಯುತ್ತಿದ್ದ ಬೆಂಕೆಯ ಕಿಚ್ಚು ಅವನಾಡಿದ ಮಾತುಗಳಲ್ಲಿ ಕ್ರಾಂತಿಯ ಅಂಶ ಹಾಗೂ ಜಾತಿವ್ಯವಸ್ಥೆ ವಿರುದ್ಧ ಸಿಡಿದೇಳುವ ಅಂಶವನ್ನು ಕಾಣಬಹುದಾಗಿದೆ.

ಚಿತ್ತಾಲರ ಕಥೆಗಳಲ್ಲಿನ ಸಾಹಿತ್ಯದ ಹಿಂದಿನ ಉದ್ದೇಶ ನೈತಿಕ ಪ್ರಜ್ಞೆಯಾಗಿರಬಹುದು. ಇಲ್ಲವೇ ಪ್ರತಿಯೊಬ್ಬ ಮನುಷ್ಯನಲ್ಲಿನ ಮಾನವೀಯತೆಯನ್ನು ಬಡಿದೆಬ್ಬಿಸುವ ಉದ್ದೇಶವಾಗಿರಬಹುದು. ಅದೇನೆ ಆಗಿದ್ದರೂ ಚಿತ್ತಾಲರು ಕಥೆಗಳ ಪಾತ್ರಗಳು ಸಮಾಜದಲ್ಲಿ ನಡೆಯುತ್ತಿರುವ ಅಕ್ರಮ, ಅನ್ಯಾಯ, ದೌರ್ಜನ್ಯ, ಅನೀತಿಗಳ ವಿರುದ್ಧ ಸಿಡಿದೇಳುವ ಕ್ರಾಂತಿಕಾರಿ ಧೋರಣೆವುಳ್ಳ ಪಾತ್ರಗಳಾಗಿವೆ. ಕೆಲವೊಮ್ಮೆ ಪಾತ್ರಗಳು ಕಥೆಯಲ್ಲಿನ ಪಾತ್ರಗಳಾಗಿ ಉಳಿಯದೆ, ನಿಜ ಜೀವನದಲ್ಲೂ ಕಾಣ ಸಿಗುತ್ತವೆ.

ಇಂದಿನ ಭ್ರಷ್ಟ ಸರಕಾರದಲ್ಲಿ ಮಾನವರಿಗೆ ಇರಬೇಕಾದಂತಹ ಮೌಲ್ಯಗಳೇ ಕಳೆದು ಹೋಗಿ ಕೇವಲ ತನ್ನ ಏಳ್ಗೆಯನ್ನು ಬಯಸುವ ಜನರ ಮಧ್ಯದಲ್ಲಿ ಪ್ರೀತಿ, ಕರುಣೆ, ವಿಶ್ವಾಸ, ತ್ಯಾಗದ ಮಾತುಗಳೇ ಕೇವಲ ಪದಗಳಾಗಿ ಉಳಿದಿವೆ. ಸಮಾಜದ ಪ್ರತಿಯೊಂದು ಸ್ತರದಲ್ಲೂ ಭ್ರಷ್ಟತೆಯೆ ತುಂಬಿವೆ. ಈ ಭ್ರಷ್ಟ–ದುಷ್ಟ ಪ್ರಪಂಚದಲ್ಲಿ ಶಾಂತಿಯನ್ನು ನೆಲೆಗೊಳಿಸಕೊಳ್ಳಬೇಕಾದರೆ ನಿಜವಾದ ಕ್ರಾಂತಿಗಳಾಗಬೇಕು.

ಸಮಾಜದಲ್ಲಿ ಎಲ್ಲೆಯೇ ಇಲ್ಲದ ದೌರ್ಜನ್ಯಗಳು ಪ್ರತಿದಿನ ನಡೆಯುತ್ತಲೇ ಇರುವುದನ್ನು ನಾವು ದಿನಪತ್ರಿಕೆಗಳಲ್ಲಿ, ಮಾಧ್ಯಮಗಳಲ್ಲಿ ಓದುತ್ತಿದ್ದೇವೆ. ನೋಡುತ್ತಿದ್ದೇವೆ.

ಇತ್ತೀಚಿನ ದಿನಗಳಲ್ಲಿ(ಕೆಲವು ತಿಂಗಳ ಹಿಂದೆ) ಆತ್ಮಹತ್ಯೆ ಮಾಡಿಕೊಂಡು ಸತ್ತ ಐ.ಎ.ಎಸ್. ಅಧಿಕಾರಿ ಡಿ.ಕೆ. ರವಿಯ ಪ್ರಕರಣದಲ್ಲಿ ಅವರ ಸಾವಿಗೆ ಸಾಮಾಜಿಕ ಜಾಲತಾಣಗಳಲ್ಲಿ ಜನರು ಅವರವರ ಅಭಿಪ್ರಾಯ ನೀಡುತ್ತಿದ್ದರು. ಅದೇನೇ ಇದ್ದರೂ ಸಮಾಜದಲ್ಲಿ ನಡೆಯುತ್ತಿರುವ ಅನ್ಯಾಯ, ಅಕ್ರಮಗಳಿಗೆ ಕಡಿವಾಣ ಹಾಕಬೇಕಾದರೆ ಪ್ರತಿಯೊಬ್ಬರು ಕ್ರಾಂತಿಕಾರರಾಗಬೇಕು. ಸ್ವಾತಂತ್ರ ವೀರ ಸಂಗೊಳ್ಳಿ ರಾಯಣ್ಣ ಕಿತ್ತೂರಿಗಾಗಿ ಕ್ರಾಂತಿಕಾರಿ ವೀರನಂತೆ ಹೋರಾಡಿ ಮಡಿದವರು. ಅವರ ಜೀವ ತ್ಯಾಗದ ಫಲವೇ ಇಂದು ನಮ್ಮ ಸ್ವತಂತ್ರ. ಅಂತೆಯೇ ಭ್ರಷ್ಟ ಸಮಾಜ ಮುಕ್ತವಾಗಿ ಸುಂದರ ಸಮಾಜವಾಗಬೇಕಾದರೆ ನಾವು ನ್ಯಾಯಸಿಗುವವರೆಗೂ ಹೋರಾಡಬೇಕು. ಹಾಗಾಗಿಯೇ ಚಿತ್ತಾಲರು ನಮ್ಮಲ್ಲಿ ಹುದುಗಿರುವ ಕ್ರಾಂತಿಕಾರಿಯ ಭಾವನೆಗಳನ್ನು ಬಡಿದೇಳಿಸುವ ಮೂಲಕ ಸಮಾಜದ ಒಳತಿಗಾಗಿ ಈ ಮೂಲಕ ಶ್ರಮಿಸಿದ್ದಾರೆ.

ಸಾಹಿತಿಯಾದವನು ಸಾಹಿತ್ಯಾಸಕ್ತನಿಗೆ ಸಾಮಾಜಿಕ ಮೌಲ್ಯಗಳನ್ನು, ನೀತಿಯ ವಿಚಾರಗಳನ್ನು ತಿಳಿಯಪಡಿಸಿದಾಗಲೇ ಅವನ ಸಾಹಿತ್ಯಕ್ಕೆ ಬೆಲೆ ದೊರೆತಂತಾಗುವುದು, ಅಲ್ಲದೇ ಪ್ರತಿಯೊಬ್ಬ ಮಾನವನಲ್ಲೂ ಕ್ರಾಂತಿಕಾರಿಯ ಅಂಶಗಳು ಹೊಂದಿದ್ದಾಗಲೇ ಉತ್ತಮ ಸಮಾಜದ ನಿರ್ಮಾಣ ಸಾಧ್ಯ ಎನ್ನಬಹುದು, ತಮಗಾಗುತ್ತಿರುವ ಅನ್ಯಾಯಗಳ ವಿರುದ್ಧ ಸಿಡಿದೆದ್ದಾಗಲೇ ಉಳ್ಳವರ ತುಳಿತದಿಂದ ಪಾರಾಗಲೂ ಸಾಧ್ಯ.

ಇಂದು ಪೋಷಕರು ಇಂಗ್ಲೀಷ್ ಭಾಷೆಯ ವ್ಯಾಮೋಹದಿಂದ ಮಕ್ಕಳನ್ನು ಪ್ರಸಿದ್ಧ ಖಾಸಗಿ ಶಾಲೆಯೊಂದಕ್ಕೆ ಸೇರಿಸಲು (ನೊಂದಾಯಿಸಲು) ಲಕ್ಷಾಂತರ ರೂಗಳನ್ನ ಆಡಳಿತ ಮಂಡಳಿಗೆ ನೀಡಬೇಕು. ಇಲ್ಲವಾದರೆ ವಿದ್ಯೆ ಅವರ ಪಾಲಿಗೆ ಗಗನ ಕುಸುಮದಂತೆ ಆಗಿ ಬಿಡುತ್ತದೆ ಎಂದು ನೆನೆದು ಸಾಲ ಮಾಡಿ ಮಕ್ಕಳನ್ನು ಖಾಸಗಿ ಶಾಲೆಗಳಿಗೆ ನೊಂದಾಯಿಸಲು ಸಾಲಮಾಡಿ ಸಾಲಗಾರರಾಗುತ್ತಾರೆ. ಇಂತಹ ವಿಚಾರಗಳಲ್ಲಿ ಖಂಡಿತವಾಗಿಯೂ ಕ್ರಾಂತಿಕಾರಿ ಬದಲಾವಣೆಯಾಗಬೇಕು.

ಕುವೆಂಪುರವರ ಸಣ್ಣ ಕಥೆಗಳಲ್ಲಿ 'ಸಾಲದ ಮಗು' ಕಥೆಯಲ್ಲಿ ಸುಬ್ಬುವಿನ ಪಾತ್ರ, ಹಾಗೂ ಈ ಸಂಕಲನದ 'ತ್ರಯೋದಶ' ಪುರಾಣದ ವೋಮು ಇವರು ಶಾಲೆಯೊಂದಕ್ಕೆ ಸೇರಿದ್ದರೆ ಬಹುಶಃ ದುರಂತ ಕಥೆಗಳ ನಾಯಕರಾಗುತ್ತಿರಲಿಲ್ಲವೇನೋ. ದುಷ್ಟರಾಜಕಾರಣಿಗಳ, ದುಷ್ಟಜನರ, ದುಷ್ಟವಿಚಾರಗಳ ವಿರುದ್ಧ ಸಿಡಿದೆದ್ದಾಗಲೇ ಕ್ರಾಂತಿಯನ್ನ ನಡೆಸಿದಾಗಲೇ ಸಮಾಜದಲ್ಲಿ ಶಾಂತಿ ಸಿಗುವುದು.

ಇಂದು ಕುಡಿಯುವ ಹಾಲು, ತಿನ್ನುವ ಹಣ್ಣು – ತರಕಾರಿಗಲೂ, ಬಳಸುವ ದವಸಧಾನ್ಯಗಳು, ಉಪಯೋಗಿಸುವ ವಸ್ತುಗಳಲ್ಲೆವು ಪರಿಶುದ್ಧತೆಯನ್ನು ಕಳೆದುಕೊಂಡು ಕಲಬೆರೆಕೆಯಾಗಿದೆ. ಇವನ್ನು ನಾವು ಸೂಕ್ಷ್ಮವಾಗಿ ಪರಿಗಣಿಸಿ ಈ ನಿಟ್ಟಿನಲ್ಲಿ ಕ್ರಮಕೈಗೊಳ್ಳಬೇಕು. ಕ್ರಾಂತಿಗಳು ನಡೆಯಬೇಕು. ಜನಸಾಮಾನ್ಯರಿಗೆ ಮನದಟ್ಟಾಗಲು ಸಾಹಿತಿಗಳು ಈ ರೀತಿಯ ವಿಚಾರಗಳನ್ನು ವಸ್ತು ವಿಷಯಗಳನ್ನಾಗಿ ಆಯ್ಕೆ ಮಾಡಿ ಸಾಹಿತ್ಯ ರಚಿಸಬೇಕು.

ಸಿನಿಮಾ ರಂಗದ ಕ್ಷೇತ್ರವನ್ನು ಬಿಟ್ಟರೆ ಜನಸಾಮಾನ್ಯರನ್ನು ಬಹುಬೇಗ ತಲುಪುವುದು ಸಾಹಿತ್ಯವೇ. ಸಾಹಿತಿಗಳಾದವರು ಸಮಾಜದ ಪಿಡುಗುಗಳಂತಿರುವ ವಿಷಯಗಳ ಮೇಲೆ ಸಾಹಿತ್ಯ ರಚಿಸಿ ಜನರಿಗೆ ಮುಟ್ಟುವಂತ ಕಾರ್ಯವನ್ನು ಮಾಡಬೇಕು. ಯಾವಾಗ ಆ ಕಿಚ್ಚು ಸಾಹಿತ್ಯಾಸಕನಿಗೆ ಮುಟ್ಟುತ್ತದೋ ಅದೇ ಕಿಚ್ಚು ತಟ್ಟಿ ಮತ್ತೊಬ್ಬನು ಎಚ್ಚೆತ್ತುಕೊಳ್ಳುತ್ತಾನೆ.

ಚಿತ್ತಾಲರ ಸಾಹಿತ್ಯ ದೃಷ್ಟಿಯೂ ಸಮಾಜವನ್ನು ಎಚ್ಚೆತ್ತುಕೊಳ್ಳುವಂತೆ ಹಾಗೂ ಮಾನವನ ಜವಾಬ್ದಾರಿಯನ್ನು ತಿಳಿಸುವಂತೆ ಮಾಡುವ ಕಾರ್ಯವನ್ನು ಮಾಡುತ್ತಿದೆ.

ನಮ್ಮ ಸಮಾಜದಲ್ಲಿ ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಭ್ರಷ್ಟಾಚಾರ, ಹಿಂಸೆ, ಸುಲಿಗೆ, ಪಾಪ ಕೃತ್ಯಗಳು ಸಂಭವಿಸುತ್ತಲೇ ಇವೆ. ಮನುಜರಾದ ನಾವು ಕಂಡು ಕಂಡರಿಯದಂತೆ ನಡೆದುಕೊಳ್ಳುತ್ತೇವೆ. ಜವಾಬ್ದಾರಿಯುತ ಮಾನವನಾದವನು ಇಂತಹ ವಿಚಾರಗಳ ವಿರುದ್ಧ ಸಿಡಿದೇಳಬೇಕು. ಉತ್ತಮ ಸಮಾಜ ನಮ್ಮದಾಗಬೇಕಾದರೆ ಕ್ರಾಂತಿಕಾರಿಯ ಭಾವನೆಗಳನ್ನು ಬೆಳಸಿಕೊಳ್ಳಬೇಕು. ಕೇವಲ ಭಾವನೆಗಳನ್ನು ಬೆಳಸಿಕೊಂಡರೆ ಸಾಲದು. ಅವುಗಳನ್ನ ಕಾರ್ಯಗತವಾಗುವಂತೆ ನಡೆದುಕೊಳ್ಳಬೇಕು.

ನಮ್ಮ ದಿನನಿತ್ಯದ ಬದುಕಿನಲ್ಲಿ ಹಲವಾರು ರೀತಿಯ ಘಟನೆಗಳು ನಡೆಯುತ್ತಲೇ ಇವೆ. ನಮ್ಮ ಅನುಭವಕ್ಕೆ ಬರುತ್ತಲೇ ಇವೆ. ನನ್ನಮಟ್ಟಿಗೆ ಬಹುವಾಗಿ ನನ್ನನ್ನು ಕಾಡಿದ ಸಮಸ್ಯೆ ಎಂದರೆ ಬಸ್ಸಿನಲ್ಲಿ ನಿರ್ವಾಹಕರು(ಕಂಡಕ್ಟರ್) ಹಾಗೂ ಆಟೋಗಳಲ್ಲಿ ಆಟೋಚಾಲಕರು ಸರಿಯಾದ ಚಿಲ್ಲರೆಯನ್ನು ಕೊಡದೆ ಸತಾಯಿಸುವುದು. ಇದು ಕೇವಲ ನನ್ನೊಬ್ಬಳ ಸಮಸ್ಯೆಯಲ್ಲ. ಪ್ರತಿದಿನವೂ ಬಸ್ಸಿನಲ್ಲಿ ಹಾಗೂ ಆಟೋಗಳಲ್ಲಿ ಸಂಚರಿಸುವ ಪ್ರಯಾಣಿಕರ ಒಂದು ರೀತಿಯ ಗೋಳು ಹಾಗೂ ಅಳಲು ಕೂಡ.

ಕಂಡಕ್ಟರ್ ತಮ್ಮ ಬ್ಯಾಗ್‌ನಲ್ಲಿ ಚಿಲ್ಲರೆಯನ್ನು ಇಟ್ಟುಕೊಂಡು ಸರಿಯಾದ ಚಿಲ್ಲರೆ ನೀಡದೆ ಪ್ರಯಾಣಿಕರನ್ನು ತೊಂದರೆಗೀಡು ಮಾಡುವುದು ಹಾಗೂ ಹಣ ಪಡೆದು ಚೀಟಿ(ಟಿಕೇಟ್)ನ್ನು ನೀಡದೆ ಗೊಂದಲಕ್ಕೀಡು ಮಾಡುವುದು. ಕೆಲವೊಮ್ಮೆಯಂತು ಬೇರೆ ಪ್ರಯಾಣಿಕರ ಬಳಿ ಚೀಟಿ ಪಡೆದು ಅದನ್ನೇ ಮತ್ತೊಬ್ಬ ಪ್ರಯಾಣಿಕರಿಗೆ ನೀಡಿ ಪ್ರಯಾಣಿಕರಲ್ಲಿ ಕಿರಿಕಿರಿ ಉಂಟುಮಾಡುವುದು.

ಈ ರೀತಿಯ ಧೋರಣೆಗಳು ಪ್ರತಿನಿತ್ಯ ನಡೆಯುತ್ತಲೆ ಇವೆ. ಇವುಗಳನ್ನೆಲ್ಲ ನಾವು ಕಂಡು ಕಾಣದಂತೆ ಇರದೆ, ಅಂತಹ ಸಂದರ್ಭದಲ್ಲಿ ನಮ್ಮಿಂದಾಂತಹ ನ್ಯಾಯಯುತವಾದ ಸಹಾಯವನ್ನು ಮಾಡಿದಾಗಲೇ ಈ ರೀತಿಯ ಭ್ರಷ್ಟಾಚಾರದ ಸಮಸ್ಯೆಯನ್ನ ಈ ಸಮಾಜದಿಂದ ಮುಕ್ತಗೊಳಿಸಲು ಸಾಧ್ಯ. ಅದಕ್ಕಾಗಿಯೇ ನಾವು, ಕ್ರಾಂತಿಕಾರಿಯ ಮನೋಭಾವನೆಯನ್ನು ಹೊಂದಲೇ ಬೇಕಾಗುತ್ತದೆ.

ಇನ್ನು ಆಟೋ (ಕೆಲವರು) ೫೮ರೂ ಮೀಟರ್‌ಗೆ ೬೦ರೂ ಪಡೆದುಕೊಂಡು ೨ರೂ ಚಿಲ್ಲರೆ ಕೊಡದೆ ಕೇಳಿದರೆ ಬೈಯುವುದು, ಅವಾಚ್ಯ ಶಬ್ದಗಳಿಂದ ನಿಂದಿಸುವುದು. ಈ ರೀತಿಯ ಪರಿಸ್ಥಿತಿಗಳು ಸುತ್ತಮುತ್ತ ನಡೆದರೆ ಅಂತಹವರ ವಿರುದ್ಧ ಸಿಡಿದೆದ್ದು ನ್ಯಾಯ ದೊರಕಿಸಿಕೊಳ್ಳಬೇಕು.

ಇಲ್ಲಿ ಕೇವಲ ಸಿಡಿದೇಳುವ ಮೂಲಕ ಪರಿಸ್ಥಿತಿಯನ್ನು ಸುಧಾರಿಸಿದರೆ ಸಾಲದು. ಈ ರೀತಿಯ ಘಟನೆಗಳು ಮುಂದೆಯೂ ನಡೆಯದಂತೆ ಕಡಿವಾಣ ಹಾಕಬೇಕು. ಇಲ್ಲವಾದರೆ ಲೇಖಕರ ಹಾಗೆ ನಮ್ಮಲ್ಲಿಯ ಪಾಪಪ್ರಜ್ಞೆಯು ನಮ್ಮನ್ನು ಕಾಡಬಹುದು.

ಮೇಲ್ಕಂಡ ಉದಾಹರಣೆಗಳು ನಮ್ಮ ದೈನಂದಿನ ಬದುಕಿನಲ್ಲಿ ಪ್ರತಿಶತ ೧೦೦ಕ್ಕೆ ಶೇಕಡಾ ಹತ್ತರಷ್ಟಾದರೂ ನಡೆಯುವಂತಹದ್ದು. ಸಾರ್ವಜನಿಕ ಸ್ಥಳಗಳಲ್ಲಿ, ಶಾಲಾಕಾಲೇಜುಗಳಲ್ಲಿ, ದೇವಸ್ಥಾನಗಳಲ್ಲಿ ಹೀಗೆ ಹೇಳುತ್ತಾ ಹೋದರೆ ಪಟ್ಟಿ ಗಗನ ಮುಟ್ಟೀತು. ಇಲ್ಲಿ ಕೇವಲ ನಾನು ನೀಡಿರುವುದು ಎಣಿಕೆಯಷ್ಟು ಉದಾಹರಣೆ. ಅದಕ್ಕಾಗಿಯೇ ಲೇಖಕರು ನಮ್ಮನ್ನೇ ಪೋಮುವಿನಂತಹ ಪಾತ್ರದ ಮೂಲಕ ಎಚ್ಚೆತ್ತಿಸುತ್ತಿದ್ದಾರೆ. ನಮಗೂ ಪೋಮುವಿನ ರೀತಿ ಅನ್ಯಾಯವಗಬಾರದೆಂಬುದೇ ಲೇಖಕರ ಉದ್ದೇಶ.

ಸಾಹಿತ್ಯದ ಹಾಗೂ ಸಾಹಿತಿಗಳ ಕಾರ್ಯವೇ ಇಷ್ಟು, ಸಮಾಜವನ್ನು ಹಾಗೂ ಸಮಾಜದ ಜನರನ್ನು ಉತ್ತಮ ಸ್ಥಿತಿಗೆ ಕೊಂಡೊಯ್ಯಲು ಪಾತ್ರಗಳನ್ನ ಸೃಷ್ಟಿಸಿಯೋ ಅಥವಾ ಪಡೆದ ಅನುಭವಗಳನ್ನು ಬರಹ ರೂಪಕ್ಕಿಳಿಸಿಯೋ ನಮ್ಮನ್ನು ತಿದ್ದುವ ಕಾರ್ಯವನ್ನು ಮಾಡುತ್ತಲೇ ಇರುತ್ತಾರೆ. ಅಂತಹ ಕಾರ್ಯವನ್ನು ಚಿತ್ತಾಲರು ಮಾಡಿದ್ದಾರೆ.

ಇವರ ಬಹುಕೃತಿಗಳು ಸಾಮಾಜಿಕ ಮುಖಾಮುಖಿಯನ್ನು ಹೊಂದಿರುವ ವಸ್ತುಗಳಾಗಿದ್ದು ಸಮಾಜಕ್ಕೆ ಒಳ್ಳೆಯ(ಧನಾತ್ಮಕ) ಸಂದೇಶವನ್ನು ನೀಡುವುದೇ ಇವರ ಸಾಹಿತ್ಯದ ಹಿಂದಿನ ಉದ್ದೇಶ. ಕೇವಲ ಪೋಮುವಿನ ಪಾತ್ರದ ಮೂಲಕ ಚಿತ್ತಾಲರು ಕ್ರಾಂತಿಕಾರರಾಗಿ ನಿಲ್ಲುವುದಿಲ್ಲ. ಇವರ ಪ್ರತಿಯೊಂದು ಕಥೆಯೂ ಸಾಮಾಜಿಕ ಮುಖಾಮುಖಿಯನ್ನು ಹೊಂದಿರುವ ಕಥೆಗಳಾಗಿವೆ. ಅವರ ಆ ನಿಲುವುದಳನ್ನ ಬರವಣಿಗೆಯ ಮೂಲಕ ಅಭಿವ್ಯಕ್ತಗೊಳಿಸಿ ಸಮಾಜದ ಕಂದಕಗಳನ್ನು ತೊಡೆದು ಹಾಕಲು ಪ್ರಯತ್ನಿಸಿದ್ದಾರೆ.

ಅಡಿಟಿಪ್ಪಣಿ

೧. "ಕಥೆಯಾದಳು ಹುಡುಗಿ" ಯಶವಂತ ಚಿತ್ತಾಲ, ಪ್ರಿಸಮ್ ಬುಕ್ ಹೌಸ್, ಬೆಂಗಳೂರು - ೨೦೦೯ - ಪುಟ-

೨. "ಕಥೆಯಾದಳು ಹುಡುಗಿ" ಯಶವಂತ ಚಿತ್ತಾಲ, ಪ್ರಿಸಮ್ ಬುಕ್ ಹೌಸ್, ಬೆಂಗಳೂರು - ೨೦೦೯ - ಪುಟ-

# ಅಧ್ಯಾಯ ೫
# ಈ ಸಂಕಲನದ ಕಥೆಗಳಲ್ಲಿನ ಪಾತ್ರಗಳ ವಿಶ್ಲೇಷಣೆ

**'ಕಥೆಯಲ್ಲಿ ಬಂದಾತ ಮನೆಗೂ ಬಂದು ಕದ ತಟ್ಟಿದ'**

**ವೋಮು**

ಮುಂಜಾನೆಯ ಬೆಳಕಿನಲ್ಲಿ ಲೇಖಕರ ಮನೆಗೆ ಅಪರಿಚಿತ ವ್ಯಕ್ತಿಯಂತೆ ಕಂಡವನಾದರು, ನಂತರದ ಸಮಯದಲ್ಲಿ ತನ್ನ ಕಥೆಯಲ್ಲಿ ಬಂದ ಹರಿಜನ ಹುಡುಗ ಎಂಬುದು ಲೇಖಕರಿಗೆ ಅರಿವಾಗುವುದು ವೋಮು ತನ್ನ ಸ್ನೇಹಿತನಾದ ವಿನಾಯಕನ ಹೆಸರನ್ನು ಬಳಿಸಿದಾಗ, ತನ್ನ ಜನರ ನ್ಯಾಯಕ್ಕಾಗಿ, ಅವರ ಉದ್ಧಾರಕ್ಕಾಗಿ ಹೋರಾಡಿ ಕಥೆಯಿಂದಲೇ ಕಣ್ಮರೆಯಾದವನು. ಆದರೂ ಓದುಗರ ಮನದಲ್ಲಿ ಇನ್ನು ಜೀವಂತವಾಗಿ ಸ್ಮರಿಸುತ್ತಲೇ ಇರುವವನು. ಅಂತಹ ಅದ್ಭುತ ಪಾತ್ರವೇ ವೋಮು.

ವೋಮು, ಜೋಪಡಿ ಜನರ ಉದ್ಧಾರಕ್ಕಾಗಿ ಹೋರಾಡಿ, ಶ್ರಮಿಸಿ ರಾಜಕಾರಣೀಯೊಬ್ಬನ ಕುತಂತ್ರದಿಂದ, ಜೋಪಡಿ ಜನರ ವ್ಯಕ್ತಿಯೊಬ್ಬನಿಂದಲೇ ಅನ್ಯಾಯಕ್ಕಾಗಿ ಒಳಗಾದವನು. ನ್ಯಾಯ ಪಡೆಯಲು ಹೋಗಿ ನ್ಯಾಯದಿಂದಲೇ ಅನ್ಯಾಯಕ್ಕೆ ಗುರಿಯಾದವನು.

ಈ ಒಂದು ಕಥೆಯಲ್ಲಿ ಚಿತ್ತಾಲರು ವ್ಯಕ್ತಿಗಳ ಹಲವು ಮುಖಗಳನ್ನೇ ತೋರಿಸಿದ್ದಾರೆ. ವೋಮು ಒಬ್ಬ ಬಂಡಾಯಗಾರನಂತೆ ಕಂಡರೂ ಕೊನೆಯಲ್ಲಿ ಅಸಹಾಯಕನಾಗಿ ನಿಲ್ಲುತ್ತಾನೆ. ನಮ್ಮ ಜನರಿಗಾಗಿ, ಸಮಾಜಕ್ಕಾಗಿ ಎಷ್ಟೇ ಹೋರಾಡಿದರು, ದುಷ್ಟ ಜನರ ಸಂಚಿಗೆ ಬಲಿಯಾಗುತ್ತಲೇ ಇದ್ದೇವೆ ಎಂಬುದನ್ನ ಲೇಖಕರು ರಾಜಕಾರಣೀಯ ಪಾತ್ರವನ್ನು ಸೃಷ್ಟಿಸುವ ಮೂಲಕ ತಿಳಿಸಿದ್ದಾರೆ.

ರಾಜಕಾರಣೀಯ ಕುತಂತ್ರಕ್ಕೆ ಬಲಿಯಾದ ಜೋಪಡಿಯ ಜನರಲ್ಲೊಬ್ಬನು ವೋಮುವಿನ ನ್ಯಾಯುಪರತೆಯನ್ನು, ಕ್ರಿಯಾಶೀಲತೆಯನ್ನು ಅರ್ಥವಾಡಿಕೊಳ್ಳದೇ ದುಷ್ಟ ರಾಜಕಾರಣೀಯೊಬ್ಬನು ತೋಡಿದ ಗುಂಡಿಗೆ ಕುರುಡನಂತೆ ಬೀಳುತ್ತಾನೆ.

ಮಾನವೀಯತೆಯನ್ನು ಹೊಂದಿರಬೇಕಾದ ಮಾನವ, ಮಾನವೀಯತೆಯನ್ನ ಮರೆತು ಕೇವಲ ತನ್ನ ಆಸೆಗಳಿಗೆ ಬೆಲೆಕೊಟ್ಟು ಅದರ ಹಿಂದೆ ಓಡುತ್ತಾ ಧರ್ಮದ ನೆಲೆಯಲ್ಲಿ ಬಾಳಬೇಕಾದವನು ಅಧರ್ಮದ ಬದುಕಿನಲ್ಲಿ ಸಾಗುತ್ತ ಅನ್ಯಾಯದಿಂದಲೇ ಜೀವಿಸುತ್ತಿದ್ದಾನೆ

ಇಲ್ಲಿ ಮತ್ತೊಂದು ಗಮನಿಸಬೇಕಾದ ವಿಚಾರವೆಂದರೆ ವೋಮು ಒಬ್ಬ ಹರಿಜನ ಹುಡುಗ. ಹರಿಜನರು ಹಿಂದಿನಿಂದಲೂ ತಮ್ಮ ನ್ಯಾಯಕ್ಕಾಗಿ ಹೋರಾಡುತ್ತಲೇ ಬಂದಿರುವ

ಜೀವಿಗಳು. ಅವರಿಗೂ ಸಮಾಜದಲ್ಲಿ ಸ್ಥಾನಮಾನವನ್ನು ಕಾಯ್ದುಕೊಳ್ಳಲು, ನೆಲೆಕಾಣಲು, ಹಲವಾರು ರೀತಿಯಲ್ಲಿ ಚಿಂತಿಸುತ್ತಿದ್ದಾರೆ.

ಈ ಸಂಕಲನವು ರಚನೆಯಾದದ್ದು ೧೯೭೧ರಲ್ಲಿ. ಅಂದರೆ ಅಂದಿನ ಸಮಾಜದ ಜಾತಿವ್ಯವಸ್ಥೆಯನ್ನು, ಸಂಪ್ರದಾಯದ ರೀತಿನೀತಿಗಳನ್ನು ಕಟ್ಟಿ ಕೊಟ್ಟಿದೆ. ಅಲ್ಲದೆ ಅಂದಿನ ರಾಜಕಾರಣೀಯಂತೆ ಪ್ರಸ್ತುದ ರಾಜಕಾರಣೀಯಲ್ಲೂ ಯಾವುದೇ ವ್ಯತ್ಯಾಸವನ್ನು ಹೊಂದದೆ ಸಾಮತ್ಯೆಯನ್ನೇ ಕಾಣಬಹುದು.

ರಾಜಕಾರಣೀಗಳ ಕುತಂತ್ರಕ್ಕೂ, ಆಮಿಷಕ್ಕೂ ಬಲಿಯಾದ, ಬಲಿಯಾಗಿರುವ ಜನರನ್ನೇ, ಸಮೂಹವನ್ನೇ ಇಂದಿಗೂ ನಮ್ಮ ಸಮುದಾಯದಲ್ಲಿ ಕಾಣಬಹುದಾಗಿದೆ. ಇದರಿಂದಲೇ ದೇಶದ ಏಳ್ಗೇಯು ಕುಂಠಿತವಾಗಿ ಭಾರತ ಇನ್ನು ಅಭಿವೃದ್ಧಿ ಹೊಂದುತ್ತಿರುವ ದೇಶದ ಪಟ್ಟಿಗೆ ಸೇರಿದೆ.

**ಲೇಖಕರು:**

ತಮ್ಮ ಅನುಭವಗಳನ್ನೇ ಕಥೆಯಾಗಿ ಬರೆದವರು ಲೇಖಕರು. ಕಥೆಯಲ್ಲಿ ಬಂದ ವೋಮುವಿಗೆ ಲೇಖಕರು ಕಣ್ಣಿಗೆ ಕಾಣವು ಪ್ರತ್ಯಕ್ಷ ದೇವರಂತೆ ಕಂಡವರು. ಆದರೆ ಅವರಲ್ಲಿದ್ದ ಸ್ವಾರ್ಥ ಚಿಂತನೆ, ಅಹಂ ವೋಮುವಿಗೆ ಮಾಡಬೇಕಾದ ಸಹಾಯವನ್ನು ತಡೆಯುತ್ತದೆ. ಇದರಿಂದ ವೋಮು ಅಸಹಾಯಕನಂತೆ ನಿಲ್ಲಬೇಕಾಗುತ್ತದೆ.

ಮನುಷ್ಯನಲ್ಲಿ ದರ್ಪ, ಅಹಂಕಾರ, ಗತ್ತು, ನಾನು ಎನ್ನುವುದು ಅವನನ್ನು ಯಾವ ಮಟ್ಟಕ್ಕೆ ಕೊಂಡೊಯ್ಯುತ್ತದೆ ಎಂಬುದನ್ನು ಈ ಕಥೆಯೂ ಸ್ಪಷ್ಟ ಚಿತ್ರಣವನ್ನ ನೀಡುತ್ತದೆ.ಲೇಖಕರು ಮನಸ್ಸು ಮಾಡಿ, ವೋಮು ತಂದ ಲಕೋಟೆಯನ್ನ ತೆರೆದು ಓದಿದರೆ ಸತ್ಯದ ಅರಿವಾಗಿ ಅವನಿಗೆ ನ್ಯಾಯ ಲಭಿಸುತ್ತಿತ್ತೇನೋ? ಆದರೆ ಲೇಖಕರ ತಪ್ಪು ತಿಳಿವಿನಿಂದ ಪರೋಕ್ಷವಾಗಿ ಲೇಖಕರು ಅವನ ಕಣ್ಮರೆಗೆ ಕಾರಣರಾಗಿರುವಂತೆ ಕಾಣುತ್ತದೆ.

ಒಟ್ಟಿನಲ್ಲಿ ವೋಮುವಿನ ಜೋಪಡಿ ಜನರಿಗಾಗಿ ಹೋರಾಡುವ ನಿಸ್ವಾರ್ಥ ಸೇವೆ, ಹಾಗೂ ಲೇಖಕರ ಸ್ವಾರ್ಥ ಚಿಂತನೆ ಈ ಕಥೆಯನ್ನ ಇನ್ನು ಸಶೇಷವಾಗಿ ಉಳಿಸಿಟ್ಟಿದೆ.

## ಕಥೆಯಾದಳು ಹುಡುಗಿ

**ಜಾನಕಿ**

ಈ ಕಥೆಯ ಪ್ರಮುಖ ನಾಯಕಿ. ಹದಿಮೂರು ವರ್ಷದ ಈಕೆಗೆ ಶಾಪವೆಂಬಂತೆ ರಕ್ತದ ಕ್ಯಾನ್ಸರ್ ತಗಲಿರುತ್ತದೆ. ಈ ರೋಗದಿಂದಲೇ ಸಾವನ್ನಪ್ಪಿದರು, ಓದುಗರ ಮನಸ್ಸನ್ನು ಬೇಸರಕ್ಕೆ ಗುರಿಮಾಡುವುದು ಅವಳ ಮೇಲೆ ನಡೆಯುವ ಅತ್ಯಾಚಾರ.

ಹದಿಮೂರು ವರುಷದ ಬಾಲೆಗೆ ಅತ್ಯಾಚಾರದ ಕಲ್ಪನೆಯೂ ಇರದ ಇವಳಿಗೆ, ಕಿರಾತಕರಂತೆ ಬಂದು ಇವಳ ಮೇಲೆ ಅತ್ಯಾಚಾರವೆಸಗುವುದು ಅವರ ಗಣಿಧಣಿಗಳ ಮಕ್ಕಳು.

ನಮ್ಮ ಸಮಾಜದಲ್ಲಿ ಉಳ್ಳವರು ಬಡವರ ಮೇಲೆ ದರ್ಪ ದಬ್ಬಾಳಿಕೆಗಳನ್ನು ನಡೆಸುತ್ತಲೇ ಬಂದಿದ್ದಾರೆ. ತಮ್ಮ ಆಸೆ ಅಹಂಕಾರಗಳಿಗೆ ಬಡವರನ್ನು ಬಲಿಪಶುಗಳನ್ನಾಗಿ ಮಾಡುತ್ತಲೇ ಬಂದಿದ್ದಾರೆ.

ಈ ಕಥೆಯಲ್ಲಿ ಲೇಖಕರು ಜಾನಕಿಗಾದ ಅನ್ಯಾಯಗಳನ್ನು ಕೊಡಿಸದಿದ್ದರೂ ಸಮಾಜದಿಂದ 'ಅತ್ಯಾಚಾರದ' ಪಿಡುಗನ್ನು ತೊಲಗಿಸಲು ಘೋಷಣೆಯ ಚಿಂತನೆಯನ್ನು ಕೈಗೊಂಡಿದ್ದಾರೆ ಎಂಬುದನ್ನು ತಿಳಿಯಬಹುದು. ದಶಕಗಳಿಂದಲೂ ಈ ಪಿಡುಗನ್ನು ಬುಡಮೇಲೂ ಮಾಡಲು ಶ್ರಮವಹಿಸಿದರು, ಇದರ ಹಾವಳಿ ಇನ್ನು ಹೆಚ್ಚಾಗುತ್ತಿದೆಯೆ ಹೊರತು ಕಡಿಮೆಯಾಗಿಲ್ಲ. ಇಂದಿಗೂ ಸಮಾಜದಲ್ಲಿ 'ಅತ್ಯಾಚಾರದ' ಮಾಹಮಾರಿ ನಡೆಯುತ್ತಲೇ ಇವೆ.

ಸರ್ಕಾರ, ಕಾನೂನು, ನ್ಯಾಯಾಂಗ ವ್ಯವಸ್ಥೆಗಳೆಲ್ಲವೂ ಇದನ್ನು ತೊಡೆದು ಹಾಕಲು, ಮಟ್ಟಹಾಕಲು ಸರಿಯಾದ ಕ್ರಮವನ್ನೇ ತೆಗೆದುಕೊಳ್ಳಬೇಕು. ಅತ್ಯಾಚಾರವೆನ್ನುವ ಪಿಡುಗನ್ನು ಬುಡಮೇಲು ಮಾಡಲು ನಿಸ್ವಾರ್ಥ ಕಾರ್ಯಗಳನ್ನು, ನಿಯಮಗಳನ್ನು ತೆಗೆದುಕೊಳ್ಳಬೇಕು. ಬಡವರ ಮೇಲೆ ನಡೆಯುವ ದೌರ್ಜನ್ಯಗಳನ್ನು ಕಾನೂನು ವ್ಯವಸ್ಥೆಗೆ ಬಂದಾಗ ಸರಿಯಾದ ನ್ಯಾಯವನ್ನ ನಮ್ಮ ಕಾನೂನಿನ ವ್ಯವಸ್ಥೆಯಲ್ಲಿ ಕೊಡಿಸಬೇಕು. ಕೆಲವೊಮ್ಮೆ ನಡೆಯುವ ಅತ್ಯಾಚಾರದ ಘಟನೆಗಳು ಖಾಕಿಧರಿಸುವವರ ಕುಮ್ಮಕ್ಕಿನಿಂದಲೇ ಬೆಳಕಿಗೆ ಬಾರದೆ ಹೋಗುವುದೇ ಹೆಚ್ಚು. ಆದರೆ ಅನ್ಯಾಯಕ್ಕೊಳಗಾದವರ ಪಾಡು ಒಂದು ಪ್ರಶ್ನೆಯೆ ಸರಿ. ಈ ಅತ್ಯಾಚಾರವನ್ನು ತಡೆಗಟ್ಟಲು ಶಾಸಕಾಂಗ, ಕಾರ್ಯಾಂಗ, ನ್ಯಾಯಾಂಗಗಳ ಜೊತೆಯಲ್ಲಿ ಪ್ರಜ್ಞಾವಂತ ನಾಗರೀಕರಾದ ನಾವು ಒಂದು ಭಾಗವಾದಾಗ ಮಾತ್ರವೇ ಈ ರೀತಿಯ ದೌರ್ಜನ್ಯಗಳನ್ನು ಸರಿಗಟ್ಟಲು ಸಾಧ್ಯ

ಇಲ್ಲವೇ ಜಾನಕಿಗಾದ ಅನ್ಯಾಯವೇ ಮುಂದುವರೆಯುತ್ತಾ ಹೋಗಿ, ಕೊನೆಗೆ ನಮ್ಮ ಬಾಳುವಿಕೆಗೆ ಯಾವುದೇ ಅರ್ಥವೇ ದೊರೆಯದಂತಾಗುತ್ತದೆ.

**ಲೇಖಕರ ಹೆಂಡತಿ**

ಈ ಕಥೆಯಲ್ಲಿ ಇವರ ಪಾತ್ರ ಕಾಣಸಿಗುವುದು ಕೆಲವೊಮ್ಮೆಯಾದರು ತಾಯಿಯ ಮಮತೆ ಎನ್ನುವುದು ಗಂಡನ ಪ್ರತಿಷ್ಠೆಗಿಂತ ದೊಡ್ಡದು ಎಂಬುದನ್ನು ಇವರು ನೀಡುವ ವಾಕ್ಯದಲ್ಲಿ ಕಾಣಬಹುದು. "ನಿಮ್ಮ ಗೆಳೆಯರಲ್ಲಿ....... ಬೆಂಕಿ ಬಿತ್ತು ನಮ್ಮ ಸಾಹಿತ್ಯಕ್ಕೆ...."[೧]

ನಮ್ಮ ದೇಶ ಪತಿಯೇ ಪ್ರತ್ಯಕ್ಷ ದೈವವೆನ್ನುವಂತೆ ಗಂಡನಿಗೆ ಸರ್ವಸ್ವವೂ ಒಳ್ಳೆಯದಾಗಲಿ ಎಂದು ಬಯಸುವವಳು. ಅದೇ ರೀತಿ ನಮ್ಮ ಸಮಾಜ ಪುರುಷ ಪ್ರಧಾನ ಸಮಾಜವಾದರೊ, ತಾಯಿಯ ಮಮತೆ, ಪ್ರೀತಿ,ಕರುಣೆಗಳ ಮುಂದೆ ಗಂಡನ ವಿಶ್ವಾಸ, ಪ್ರತಿಷ್ಠೆಯಾಗಲಿ ಹೆಚ್ಚೇನಲ್ಲ ಎಂಬುದನ್ನು ಲೇಖಕರು ಹೆಂಡತಿಯ ಮಾತುಗಳಲ್ಲಿ ಕಾಣಬಹುದು.

---

೧. "ಕಥೆಯಾದಳು ಹುಡುಗಿ" ಯಶವಂತ ಚಿತ್ತಾಲ, ಪ್ರಿಸಮ್ ಬುಕ್ ಹೌಸ್, ಬೆಂಗಳೂರು – ೨೦೦೯ – ಪುಟ– ೬೪

ಜಾನಕಿಗೆ ಲೇಖಕರ ಹೆಂಡತಿ ಸಾಕುತಾಯಿಯಾದರೂ ಪ್ರೀತಿ ವಿಶ್ವಾಸದಲ್ಲಿ ತನ್ನ ಮಗಳಂತೆ ನೋಡಿಕೊಂಡರು. ಇದು ಹೆಣ್ಣೊಬ್ಬಳ ಪ್ರೀತಿಯೂ, ತ್ಯಾಗದ ಮೂರ್ತಿ ಸಂಕೇತವೆನ್ನುವುದನ್ನ ಕಾಣಬಹುದು.

**ಲೇಖಕರ ಸ್ನೇಹಿತರು**

ಜಾನಕಿಯ ಘಟನೆಯನ್ನು ಕಥೆಯಾಗಿ ಬರೆದು ಅದಕ್ಕೆ ಕನ್ನಡ ಸಾಹಿತ್ಯ ಸಂಘಗಳಿಂದ ಪ್ರಶಂಸೆಗಳು ಬಂದಾಗ, ಲೇಖಕರ ಮನೆಯಲ್ಲಿ ಚಿಕ್ಕ ಪಾರ್ಟಿಯೊಂದನ್ನ ಏರ್ಪಡಿಸುತ್ತಾರೆ. ಅಲ್ಲಿ ಪಾರ್ಟಿ ಮುಗಿದು ಮನೆಗೆ ಹೋಗುವ ಸಂದಂರ್ಭದಲ್ಲಿ ಸ್ನೇಹಿತರು ಈ ರೀತಿಯ ಕಥೆಗಳು, ಇವನು (ಲೇಖಕರು) ಇನ್ನು ಹೆಚ್ಚ ಹೆಚ್ಚಾಗಿ ಬರೆದು ಪಾರ್ಟಿಗಳನ್ನನ ಕೊಡಲಿ ಎನ್ನುವ ಮಾತಿನಲ್ಲಿ ಮಾನವರು ಸ್ವಾರ್ಥಿಗಳು, ತಮ್ಮ ಸಂತೋಷಕ್ಕಾಗಿ, ಸಂಭ್ರಮಕ್ಕಾಗಿ ಆಗಿರುವ ಅನ್ಯಾಯಕ್ಕೆ ಸಿಡಿದೇಳುವ ಬದಲು ಆ ಕಿಚ್ಚಿನಲ್ಲಿ ತಮ್ಮ ಸಂತೋಷವನ್ನ ಕಾಣುತ್ತಿದ್ದಾರೆ ಎನ್ನುವುದನ್ನು ತಿಳಿಯಬಹುದು.

## ತ್ರಯೋದಶ ಪುರಾಣ

**ಗಣೇಶ**

ಹದಿಮೂರು ವರುಷದ ಬಾಲಕ ಗಣೇಶ. ಹೋಟೆಲ್ ಒಂದರಲ್ಲಿ ಮಾಣಿಯ ಕೆಲಸವನ್ನು ಮಾಡುತ್ತಿರುತ್ತಾನೆ. ಅದೇ ಹೋಟೆಲ್‌ನಲ್ಲಿ ಕೆಲಸ ಮಾಡುತ್ತಿದ್ದ ಗೋಪಾಲ ಗಣೇಶನ ಸ್ನೇಹಿತ.

ಗೋಪಾಲನ ನಿಕೃಷ್ಟವಾದ ಜಾತಿಯ ಮಾತುಗಳಿಗೆ ಮನನೊಂದ ಗಣೇಶ ಹೋಟೆಲ್ ಬಿಟ್ಟು, ತನಗರಿವಿಲ್ಲದ ಸ್ಮಗ್ಲರ್ ಗುಂಪಿನೊಂದಕ್ಕೆ ಕೊರಿಯರ್ ಕೆಲಸಕ್ಕೆಂದು ಸೇರಿರುತ್ತಾನೆ. ಮೇಲುನೊಟಕ್ಕೆ ಕೊರಿಯರ್ ಕೆಲಸದಂತೆ ಕಂಡರು ಅನೇಕ ವಿಗ್ರಹಗಳನ್ನು ಸ್ಮಗ್ಲಿಂಗ್ ಮಾಡುತ್ತಿರುತ್ತಾರೆ.

ಪಾಪ! ಇದನ್ನರಿಯದ ಗಣೇಶ ಅನೇಕ ಸಮಸ್ಯೆಗಳಿಗೆ ತುತ್ತಾಗುತ್ತಾನೆ. ಈ ಕಥೆಯಲ್ಲಿ ಕಂಡು ಬರುವ ಹಲವು ಅಂಶಗಳೆಂದರೆ ಮೊದಲನೆಯದಾಗಿ ನಮ್ಮ ಸಮಾಜದ ಅತಿ ದುರಂತ ಜಾತಿ ವ್ಯವಸ್ಥೆ. ಹದಿಮೂರು ವರುಷ ಬಾಲಕನ ಮನಸ್ಥಿತಿ ಹಾಗೂ ಅಸಹಾಯಕ ಬಾಲಕನ ಪರಿಸ್ಥಿತಿಯನ್ನು ನಮ್ಮ ಸಮಾಜದ ಜನರು ಉಪಯೋಗಿಸಿಕೊಳ್ಳುವ ಬಗೆ, ಅವನು ಕಾಣುವ ದುರಂತಗಳು.

ಜಾತಿ ವ್ಯವಸ್ಥೆ ಎನ್ನುವಂತಹದು ನಮ್ಮ ಸಮಾಜದ ಅತಿ ದೊಡ್ಡ ಕಂದಕ. ವ್ಯಕ್ತಿಯ ಏಳ್ಗೆಯನ್ನು ಕಾಣದಂತೆ ಮರೆ ಮಾಚುವ ಈ ವ್ಯವಸ್ಥೆ ಸಮಾಜದ ಕರಾಳ ಸ್ವರೂಪವಾಗಿದೆ. ಈ ಕೊಳಚೆಯಲ್ಲೇ ನಮ್ಮ ಜನರು ಇನ್ನು ಜೀವಿಸುತ್ತಿರುವರು.

ಈ ಕಥೆಯ ಪಾತ್ರದ ಗಣೇಶನು ಹೋಟೆಲ್ ಬಿಡುವುದಕ್ಕೆ ಪ್ರಮುಖ ಕಾರಣ ಅವನ ಜಾತಿ. ಮೂರುಸಾವಿರ ವರ್ಷಗಳಿಂದ ಆಳುತ್ತಿದ್ದ ಬ್ರಾಹ್ಮಣ ಜಾತಿಯನ್ನು ಗೋಪಾಲನು ಬೈದಾಗಲೇ ಜಾತಿಯು ಸ್ವರೂಪವನ್ನೆ ಕಾಣದ ಗಣೇಶನಿಗೆ ಕಿರಿಕಿರಿಯಾಗಿ, ಮನನೊಂದುಕೊಳ್ಳುತ್ತಾನೆ.

ಹದಿಮೂರು ವರುಷದವನಾಗಲಿ, ಇಪ್ಪತ್ಮೂರು ವರುಷದವನಾಗಲಿ ಅವರವರ ಜಾತಿಗೆ, ಧರ್ಮಕ್ಕೆನ್ನಾದರೂ ತೊಂದರಯಾದರೆ ಅಥವಾ ಅಪಚಾರವಾದರೆ ಸಹಿಸುವುದಿಲ್ಲ ಎನ್ನುವುದಕ್ಕೆ ಗಣೇಶ ಉತ್ತಮ ಉದಾಹರಣೆಯಾಗಿದ್ದಾನೆ.

ಗೋಪಾಲನು "ದುಷ್ಟರು – ಶುದ್ಧ ಬ್ರಾಹ್ಮಣ ಸೂಳೆ ಮಕ್ಕಳು..." [೨] ಎನ್ನುವುದು ಗಣೇಶನ ಮೇಲೆ ವ್ಯತಿರಿಕ್ತ ಪರಿಣಾಮ ಉಂಟಾಗಿ ಸ್ಮಗ್ಲರ್ ಗುಂಪನ್ನ ಸೇರಲು ಕಾರಣವಾಗುತ್ತದೆ. ಈ ರೀತಿಯ ಅನಾಥ ಹುಡುಗರನ್ನೆ ಇಂತಹ ಕೆಲಸಗಳಿಗೆ ಹಚ್ಚಲು ಬಕಪಕ್ಷಿಗಳಂತೆ ಕಾಣುವ ಸ್ಮಗ್ಲರ್ ಗುಂಪುಗಳು ನಮ್ಮ ಸಮಾಜದಲ್ಲಿ ಸಾಕಷ್ಟಿವೆ.

ಕೊನೆಗೆ ಈ ರೀತಿಯ ಸ್ಮಗ್ಲರ್ ಗುಂಪಿಗೆ ಸೇರಿದರೆ ದುರಂತ ಕಟ್ಟಿಟ್ಟ ಬುತ್ತಿ ಎಂಬುದು ಸ್ಪಷ್ಟವಾಗುತ್ತದೆ. ಕೋತಿ ಮೊಸರನ್ನ ತಿಂದು ಮೇಕೆ ಮೂತಿಗೆ ಒರೆಸುವಂತೆ ಯಾರೋ ಮಾಡಿದ ತಪ್ಪಿಗೆ ಗಣೇಶನು ಬಲಿಪಶುವಾಗುತ್ತಾನೆ. ಕೇವಲ ಅಷ್ಟಕ್ಕೆ ಮಾತ್ರ ಬಿಡದೆ ಸಾವಿನ ದಾರಿಯನ್ನೇ ತೋರುತ್ತದೆ ಎಂಬುದಕ್ಕೆ ಗಣೇಶನ್ನನ್ನು ಚಾಕುವಿನಿಂದ ಇರಿದಾಗ ತಿಳಿಯುತ್ತದೆ.

ಅನಾಥರು ಎನ್ನುವ ಪ್ರೀತಿಯಿರದೆ ಕೇವಲ ಹಣಕ್ಕಾಗಿ ದುಡಿಸಿಕೊಳ್ಳುವ ಇವರು ಮಾನವರಾಗಿ ಜೀವಿಸಲು ಅನರ್ಹರು ಎಂಬುದನ್ನು ಈ ಕಥೆಯು ತಿಳಿಯಪಡಿಸುತ್ತದೆ. ಅನಾಥರಲ್ಲಿ ಮೊದಲೆ ಅನಾಥಪ್ರಜ್ಞೆ ಕಾಡುತ್ತಿದ್ದು ಅಂತಹವರಿಗೆ ಪ್ರೀತಿಯ ಸುಧೆಯನ್ನು ಹರಿಸಿ, ಸಮಾಜದ ಸತ್ಪ್ರಜೆಗಳನ್ನಾಗಿ ಮಾಡಬೇಕು. ಇಲ್ಲವಾದರೆ ಗಣೇಶನಂತೆ ದುಷ್ಟಜನರು ಅನಾಥರನ್ನು ತಮ್ಮ ಕೆಟ್ಟಕಾರ್ಯಗಳಿಗೆ ಬಲಿಪಶುಗಳನ್ನಾಗಿ ಮಾಡುತ್ತಾರೆ. ಇವರೇ ಮುಂದೆ ಸಮಾಜಕ್ಕೆ ಕಂಟಕಪ್ರಾಯಗಳಾಗುತ್ತಾರೆ. ಕಾನೂನು ಬಾಹಿರ ಕೆಲಸಗಳಲ್ಲಿ ತೊಡಗಿಕೊಂಡು ಜೀವನದ ಮೌಲ್ಯವನ್ನು ಕಳೆದುಕೊಳ್ಳುತ್ತಾರೆ ಎಂಬಿತ್ಯಾದಿ ಅಂಶಗಳನ್ನು ಕಾಣಬಹುದು. ಏನೇ ಆದರೂ ಜಾತಿ ಎನ್ನುವುದು ವ್ಯಕ್ತಿಯನ್ನು ಯಾವ ಹಂತಕ್ಕೆ ತಲುಪಿಸುತ್ತದೆ ಎಂಬುದನ್ನು ಚಿತ್ತಾಲರು ಹದಿಮೂರು ವರ್ಷದ ಗಣೇಶನ ಮೂಲಕ ಹೇಳಿದ್ದಾರೆ.

## ಅಶ್ವತ್ಥಾಮ

### ರಾಮಚಂದ್ರ

ರಾಮಚಂದ್ರ ಪ್ರಿಂಟಿಂಗ್ ಅಂಗಡಿಯೊಂದನ್ನು ಹೊಂದಿದ್ದು ಕಥೆಗಳನ್ನು ಬರೆಯುತ್ತಿದ್ದ ವ್ಯಕ್ತಿ. ಹಿಂದೆ ನಡೆದ ಘಟನೆಯೊಂದನ್ನ ಅವನಿಗರಿವಿಲ್ಲದೆ ಕಥೆಯ ಮೂಲಕ ಬಿಡಿ ಬಿಡಿಯಾಗಿ ಬರೆದಿರುತ್ತಾನೆ. ಮನೆಗೆಲಸದ ವಾಸುವಿನೊಂದಿಗೆ ಬರೆದ ಕಥೆ ಓದಲು ಕುಳಿತಾಗಲೇ ಅವನಿಗೆ ಜೀವನದಲ್ಲಿ ನಡೆದ ಕಹಿ ಘಟನೆಯ ಜ್ಞಾಪಕವಾಗುವುದು.

ಈ ಕಥೆಯನ್ನು ಸೂಕ್ಷ್ಮವಾಗಿ ಓದಿದರೆ ಲೇಖಕರು ಮನೋಸಿದ್ಧಾಂತದ ಮೇಲೆ ರಚಿತವಾಗಿರುವ ಕಥೆಯಾಗಿರುತ್ತದೆ. ವ್ಯಕ್ತಿಯ ಸುಪ್ತ ಮನಸ್ಸು ಎಷ್ಟರ ಮಟ್ಟಿಗೆ ಎಚ್ಚರವಾಗಿರುತ್ತದೆ ಹಾಗೂ ಕಾರ್ಯಪ್ರವೃತ್ತವಾಗಿರುತ್ತದೆ ಎಂಬುದನ್ನು ತಿಳಿಸುತ್ತದೆ. ಸಿಗ್ಮಂಡ್ ಫ್ರಾಯ್ಡರ ಮನೋಸಿದ್ಧಾಂತದ ಮೇಲೆ ರಚಿತವಾದ ಈ ಕಥೆ ಎಂದೋ ಮಾಡಿದ ಕಹಿ ಘಟನೆಯಾಗಿರಲಿ

---

೨. "ಕಥೆಯಾದಳು ಹುಡುಗಿ" ಯಶವಂತ ಚಿತ್ತಾಲ, ಪ್ರಿಸಮ್ ಬುಕ್ ಹೌಸ್, ಬೆಂಗಳೂರು – ೨೦೦೯ – ಪುಟ– ೭೧

ಸಿಹಿ ಘಟನೆಯಾಗಿರಲಿ ಸುಪ್ತ ಮನಸ್ಸಿನಲ್ಲಿ ಆಳವಾಗಿ ಮೂಡಿದರೆ ಅದು ಕೆಲವೊಮ್ಮೆ ನಮಗರಿವಿಲ್ಲದೆ ಹೊರಬರುತ್ತವೆ ಎಂಬುದಕ್ಕೆ ಸಾಕ್ಷಿಯಾಗಿದೆ.

ಕೆಲವರು ಮನಸ್ಸಿನಲ್ಲಿರುವ ಉದ್ವೇಗಗಳನ್ನು ಹಲವಾರು ರೀತಿಯಲ್ಲಿ ಹೊರಚೆಲ್ಲುತ್ತಾರೆ. ಉದಾಹರಣೆ ನಿದ್ದೆಯಲ್ಲಿ ಹೇಳುವಾಗ, ಇನ್ನು ಕೆಲವರು ಬೇರೆಯೊಬ್ಬರಿಗೆ ತಿಳಿಸುವಾಗ, ಉಳಿದವರು ಬೇರೆಯವರ ಮೂಲಕ ವಿಚಾರ ವಿನಿಮಯಗಳನ್ನು ಮಾಡಿಕೊಳ್ಳುವಾಗ. ಅಂತಹ ವಿಚಾರಗಳ ಮೇಲೆ ರಚಿತವಾದಂತಹ ಕಥೆಯ 'ಅಶ್ವತ್ಥಾಮ'.

'ಮನಸ್ಸು' ಶಾಂತತೆಯ ಭಾವನೆಯನ್ನು ಹೊಂದಿರಬೇಕು. ಕಸಕಡ್ಡಿಗಳ ಆಗರವಾದರೆ ಕೆಲವೊಮ್ಮೆ ನಮಗರಿವಿಲ್ಲದೆಯೆ ಸ್ಫೋಟಗೊಳ್ಳುತ್ತವೆ ಎಂಬುದನ್ನು ರಾಮಚಂದ್ರನು ಬರೆದಿರುವ ಕಥೆಯಲ್ಲಿ ಸ್ಪಷ್ಟವಾಗಿ ಕಾಣುತ್ತದೆ.

ಕೇವಲ ದೇಹವನ್ನು ಶುಚಿಯಾಗಿಟ್ಟುಕೊಂಡರೆ ಸಾಲದು. ಮನಸ್ಸಿನ ಶುದ್ಧತೆ ಮುಖ್ಯವಾಗಿರುತ್ತದೆ. ಮನಸ್ಸಿನ ಶುದ್ಧತೆಯನ್ನು, ಶಾಂತತೆಯನ್ನು ಬಯಸಿದವರಿಗೆ ಅವರಿಗರಿವಿಲ್ಲದೆ ಅವರ ಸುಪ್ತ ಮನಸ್ಸು ಅವರಿಗೆ ಸಹಾಯ ಮಾಡುತ್ತದೆ. ಯಾವಾಗ ಮನಸ್ಸಿನ ಆತಂಕ ಕಡಿಮೆಯಾಗುತ್ತದೋ ಮನಸ್ಸು ಹಗುರವಾಗುತ್ತದೆ. ಶಾಂತತೆಯ ಭಾವನೆಯನ್ನು ಕಾಣುತ್ತದೆ.

ಒಟ್ಟಿನಲ್ಲಿ ಈ ಕಥೆಯೊಂದು ಮನೋಸಿದ್ಧಾಂತದ ಮೇಲೆ ರಚಿತವಾದ ಕಥೆಯಾಗಿದೆ. ಹಾಗೂ ರಾಮಚಂದ್ರನ ಪಾಪಪ್ರಜ್ಞೆಯೂ ಅವನನ್ನ ಕಥೆ ಬರೆಯಲು ಪ್ರೇರಕ ಶಕ್ತಿಯಾಗಿರಬಹುದು ಎನಿಸುತ್ತದೆ.

## ಮುಖಾಮುಖೀ

### ಇಂದಿರಕ್ಕ ಹಾಗೂ ಲೇಖಕರು

ಈ ಕಥೆಯು ಪ್ರಮುಖ ನಾಯಕಿ ಇಂದಿರಕ್ಕ. ಲೇಖಕರು ಬಾಲ್ಯದ ದಿನಗಳಲ್ಲಿ ಇಂದಿರಕ್ಕನೊಂದಿಗಿನ ಸ್ನೇಹ, ಸಂಬಂಧ, ಪ್ರೀತಿ–ವಿಶ್ವಾಸಗಳು ಅವಳ ರೂಪ–ಮೈಮಾಟ ಇಂದಿರಕ್ಕನನ್ನ ಬಾಲ್ಯದ ಗೆಳತಿಯೆಂತಾಗಲು ಕಾರಣವಾದವು.

ಒಂದುದಿನ ಮೊತ್ತೆಮೀಸೆಯವ ಇಂದಿರಕ್ಕನಿಗೆ ಕೊಡಲು ಚೀಟಿಯೊಂದನ್ನು ಲೇಖಕರಿಗೆ (ಬಾಲ್ಯದಲ್ಲಿ) ಕೊಟ್ಟಾಗ ಅದನ್ನು ತಪ್ಪು ತಿಳಿದು ಲೇಖಕರು ಹರಿದು ಹಾಕುವುದೇ, ಇಂದಿರಕ್ಕನ ದುಃಸ್ಥಿತಿಗೆ ಕಾರಣವೆಂದು ತಿಳಿದು ಮನಃನೊಂದು ಕೊಳ್ಳುತ್ತಾರೆ.

ವ್ಯಕ್ತಿಯೂ ಬಾಲ್ಯದ ದಿನಗಳಲ್ಲಿ ತನಗೆ ಗೊತ್ತಿದ್ದು, ಗೊತ್ತಿಲ್ಲದೆಯೊ ಮಾಡಿದ ತಪ್ಪಿನಿಂದಾಗಿ, ಮನವು ತಪ್ಪಿನ ಚಿಂತನೆಯಲ್ಲಿ ಹಾಗು ಆ ತಪ್ಪು ಮುಖಾಮುಖಿಯಾದಾಗ, ಎದುರಾಗುವಂತಹ ಪರಿಸ್ಥಿತಿಗಳನ್ನ ಈ ಕಥೆಯಲ್ಲಿ ಚಿತ್ತಾಲರು ಹೇಳಿದ್ದಾರೆ.

ಇಂದಿರಕ್ಕ ದುಃಸ್ಥಿತಿಗೆ ತಾನು ಮಾಡಿದ ತಪ್ಪೇ ಕಾರಣವಾಯಿತೇನೋ. ಅಂದು ಪೊತ್ತೆಮೀಸೆಯವನು ಕೊಟ್ಟಂತಹ ಪತ್ರವನ್ನು ಇಂದಿರಕ್ಕನಿಗೆ ನೀಡಿದ್ದರೆ ಅವಳು ಸುಖವಾಗಿ ಇರುತ್ತಿದ್ದಳೊ ಎಂದು ನೆನೆಯುವ ಸಂದರ್ಭದಲ್ಲಿ ಇಂದಿರಕ್ಕ ಲೇಖಕನಿಗೆ ಪೊತ್ತೆ ಮೀಸೆಯವರು ಯಾರು? ಎಂಬುದನ್ನ ತಿಳಿಸಿದಾಗ ತಾನು ಮಾಡಿದ ಅಚಾತುರ್ಯವೇ ಕಾರಣವಾಯಿತು ಎಂದು ನೆನೆದು ಪಶ್ಚಾತಾಪ ಪಡುತ್ತಾರೆ.

ಇಲ್ಲಿ ವ್ಯಕ್ತಿಯೂ ಗೊತ್ತಿಲ್ಲದೆ ತನ್ನಿಂದ ಉಂಟಾದ ಅನಾಹುತಗಳನ್ನ ನೆನೆದು ಪಶ್ಚಾತಾಪ ಪಡುವುದು ಸಹಜ. ಅದೇ ರೀತಿ ಆ ತಪ್ಪೆ ಅವರಿಗೆ ಎದುರಿಗೆ ಮುಖಾಮುಖಿಯಾದಾಗ ಅವರಲ್ಲಾಗುವ ಕಳವಳಗಳು ತವಕಗಳು, ಎಲ್ಲವನ್ನು ಚಿತ್ರಿಸಿದ್ದಾರೆ. ಲೇಖಕರು ಹೆಂಡತಿಯ ಮೂಲಕ ಇಂದಿರಕ್ಕ ಬಂದಿರುವ ಕಾರಣ ತಿಳಿಯುವುದು, ಇವೆಲ್ಲವು ಮನುಷ್ಯನೊಬ್ಬನು, ತಾನು ಮಾಡಿದ ತಪ್ಪು ಅವನ ಮನಸ್ಸನ್ನ ಎಷ್ಟರ ಮಟ್ಟಿಗೆ ಪರಿಣಾಮ ಬೀರಿವೆ ಎಂಬದನ್ನು ತಿಳಿಯಬಹುದು. ಅಲ್ಲದೆ ಅವರು ಮಾಡಿದ ತಪ್ಪು ಪದೇ ಪದೇ ಜ್ಞಾಪಕಕ್ಕೆ ಬರಬೇಕಾದರೆ ಆ ತಪ್ಪಿನ ಆಳ, ಅದರಿಂದ ಉಂಟಾದ ಪರಿಣಾಮಗಳು, ಆ ಸಂದರ್ಭದ ಪರಿಸ್ಥಿತಿ ಇವೆಲ್ಲವನ್ನು ಈ "ಮುಖಾಮುಖಿ"ಯ ಕಥೆ ಕಣ್ಣಮುಂದೆ ತಂದು ನಿಲ್ಲಿಸುತ್ತವೆ. ಹಾಗೂ ಮನಸ್ಸಿನ ವಿಚಾರಕ್ಕೆ ಸಂಬಂಧಪಟ್ಟ ಯಾವುದೇ ವಿಷಯಗಳು ವ್ಯಕ್ತಿಯನ್ನ ಶಾಂತಿಯಿಂದಿಡಲು ಬಿಡುವುದಿಲ್ಲ ಎಂಬುದನ್ನ ಲೇಖಕರೆ ವಿವರಿಸುವ ಈ ಕಥೆಯಲ್ಲಿ ಕಾಣಬಹುದಾಗಿದೆ.

## ಚಕ್ರವ್ಯೂಹ

**ಲೇಖಕರು**

ಈ ಕಥೆಯ ನಾಯಕರು ಲೇಖಕರು. ತನ್ನ ವಯಸ್ಸಿನಲ್ಲಿನ ಅರ್ಧದಷ್ಟು ವಯಸ್ಸಿನ ಹುಡುಗಿಯ ಮೋಹಪಾಶದಲ್ಲಿ ಸಿಲುಕಿಕೊಂಡಾಗ, ಆ ಪಾಶದಿಂದ ಹೊರಬರಲಾಗದೆ, ಅನುಭವಿಸುವ ಸಂಕಟಗಳು, ಕಳೆದುಹೋದ ಭೂತಕಾಲದ ನೆನಪುಗಳು ವರ್ತಮಾನದಲ್ಲಿ ಬಂದು ಕಾಡುವ ಆಗಿನ ಮನಸ್ಥಿತಿಯನ್ನು 'ಚಕ್ರವ್ಯೂಹ'ದಲ್ಲಿ ತಿಳಿಸಿದ್ದಾರೆ.

ಲೇಖಕರು ಕೊಟ್ಟಿರುವ ಹೆಸರು ಈ ಕಥೆಗೆ ಅದ್ಭುತವಾಗಿ ಹೊಂದಾಣಿಕೆಯಾಗುತ್ತದೆ. ಮಹಾಭಾರತದ ಯುದ್ಧದಲ್ಲಿ ಅಭಿಮನ್ಯು ಚಕ್ರವ್ಯೂಹವನ್ನು ಭೇದಿಸುವ ವಿದ್ಯೆಯನ್ನ ತಿಳಿದಿರುತ್ತಾನೆ ಹೊರತು ಅದರಿಂದ ಹೊರಬರುವ ವಿದ್ಯೆಯನ್ನು ತಿಳಿದಿರುವುದಿಲ್ಲವಂತೆ ಲೇಖಕರು – ಲೂಸಿಯಾಳ ಮೋಹಕ್ಕೆ ಬಲಿಯಾಗಿ ಅವಳೊಂದಿಗೆ ಡೇಟಿಂಗ್ ಹೋಗಲು ಸಿದ್ಧರಾಗಿ ಒಂದು ದಿನ ಕಾಯುತ್ತ ಕುಳಿತಿರುವಾಗ ಅವಳ ನೆನಪುಗಳು ಅವರನ್ನ ಕಾಡಹತ್ತುವುದು. ಜೊತೆಯಲ್ಲೇ ತನ್ನ ತಪ್ಪಿನ ಅರಿವಾದಂತೆ ಅಥವಾ ಜ್ಞಾನೋದಯವಾದಂತೆ ಕುಳಿತ ಸ್ಥಳದಿಂದ ಮನೆಕಡೆಯತ್ತ ಹೆಜ್ಜೆಯಿಡುವುದು. ಇವೆಲ್ಲವೂ ಮದುವೆಯಾಗಿ ಮಕ್ಕಳೊಂದಿಗಿರುವ ವ್ಯಕ್ತಿಯೊಬ್ಬನು ಅನುಭವಿಸುವ ಸಂತೋಷ. ನಂತರದ ಆತಂಕ. ವ್ಯಕ್ತಪಡಿಸುವ ಕಳವಳ ಹಾಗೂ ತಾನು ಮದುವೆಯಾಗಿರುವ ಹೆಂಡತಿ ಮಕ್ಕಳನ್ನ ನೆನೆದು ಆ ತಪ್ಪಿನಿಂದ ಹೊರಬರಲು ತವಕಿಸುವ ಮನಸ್ಸು ಇವೆಲ್ಲವು ಚಕ್ರವ್ಯೂಹ ಕಥೆಯಲ್ಲಿ ಕಾಣಬಹುದು.

ಪರದೇಶದಲ್ಲಿ ಒಬ್ಬಂಟಿಗನಂತೆ ಇರುವಾಗ ಹುಡುಗಿಯೊಬ್ಬಳ ಮೋಹಕ್ಕೆ ಬಲಿಯಾಗುವುದನ್ನ ನಾವು ನಮ್ಮ ಪ್ರಸ್ತುತ ಸಮಾಜದಲ್ಲಿ ಕಾಣಬಹುದು. ಕೆಲವೊಮ್ಮೆ ವ್ಯಕ್ತಿ ಮನಸ್ಸಿನಿಂದ ಶುದ್ಧವಾಗಿದ್ದರೂ ಹೆಣ್ಣಿನ ಮೋಹ ಪದೇ ಪದೇ ಕಾಡುತ್ತದೆ ಎಂಬುದನ್ನು ಇಲ್ಲಿ ನಾವು ಕಾಣಬಹುದು.

ಇರುವೆ ಬೆಲ್ಲಕ್ಕೆ ಅಂಟಿಕೊಂಡಿರುವಂತೆ – ಪರದೇಶದಲ್ಲಿನ ಜೀವನ, ಹೆಣ್ಣಿನ ಮೋಹ, ಹಣ ಇವೆಲ್ಲವು ಮಾನವನನ್ನು ಒಂದು ಕ್ಷಣ ತನ್ನನ್ನೆ ಮರೆಸಿ ಆ ಮೋಹಕ್ಕೆ ಕರೆದೊಯ್ಯುತ್ತವೆ. ಹೋದರೆ ಮತ್ತೆ ಬರಲಾಗದು ಎಂಬುದನ್ನು ತಿಳಿಸುವುದೇ ಬಹುಶಃ ಈ ಕಥೆಯ ಉದ್ದೇಶವಾಗಿರಬಹುದು.

## ಉದ್ಧಾರ

### ಅಹಲ್ಯೆ

'ಅಹಲ್ಯೆ' ಎಂಬುವಳು ಈ ಕಥೆಯಲ್ಲಿ ತನ್ನ ಗಂಡನನ್ನು ಕಳೆದುಕೊಂಡು ತಾಯಿಯೊಂದಿಗೆ ಜೀವನ ನಡೆಸುತ್ತಿರುತ್ತಾಳೆ. ತಾಯಿ ಗೋಕರ್ಣದಲ್ಲಿರುವ ತನ್ನ ಅಣ್ಣನ ಮನೆಗೆ ಹೋಗಿದ್ದಾಗ ಆಗ ಅವಳಲ್ಲಿ ಆಗುವ ಭಯ, ಆತಂಕಗಳು, ಕಹಿ ಘಟನೆಯ ನೆನಪಿನ ಚಿತ್ರಣವನ್ನ ಈ ಕಥೆಯಲ್ಲಿ ತೋರಿಸಿದ್ದಾರೆ.

'ಕತ್ತಲೆ' ಎನ್ನುವುದೇ ನಕರಾತ್ಮಕ ಭಾವನೆ. ಅಹಲ್ಯೆಗೆ ಕತ್ತಲೆ ಎನ್ನುವುದು ಭಯ. ಅದರಲ್ಲಿ ಒಂಟಿತನ, ಪ್ರಕೃತಿಯಲ್ಲಿ ಬೀಳುವ ಮಳೆ ಜೋರಾಗಿ ಬೀಸುವ ಗಾಳಿ, ರಾತ್ರಿಯ ಸಮಯ ಇವೆಲ್ಲವೂ ಅವಳಲ್ಲಿ ಭಯವನ್ನುಂಟು ಮಾಡುತ್ತವೆ. ಈ ಭಯವೆ ಅವಳ ಆತ್ಮಹತ್ಯೆಗೂ ಕಾರಣವಾಗುತ್ತದೆ. ಅಮ್ಮ ಇಲ್ಲದ ಸಮಯದಲ್ಲಿ ಕೀರ್ತನಕಾರನನ್ನೇ ಗಂಡನೆಂದು ನೆನೆದು ಅವನ ಜೊತೆ ಕೂಡುವುದನ್ನ ನೆನೆದು ಹಾಗೂ ಕನಸಿನಲ್ಲಿ ಕಂಡ ಕಪ್ಪು ನಾಯಿಯ ಛಾಯೆ ಅಶುಭವೆಂದು ಮತ್ತೆ ಅದೇ ಪ್ರಸಂಗಗಳು ಎದುರಾಗುತ್ತವೆ. ಅದರಿಂದ ತಪ್ಪಿಸಿಕೊಳ್ಳು ಆ ಭಯದಲ್ಲೇ ಆತ್ಮಹತ್ಯೆಗೆ ಶರಣಾಗುತ್ತಾಳೆ.

ಈ ಕಥೆಯಲ್ಲಿ ಹೆಣ್ಣೊಬ್ಬಳ ಮನಃಸ್ಥಿತಿಯನ್ನು ಆತಂಕಗಳನ್ನು ಚಿತ್ರಿಸಿದ್ದಾರೆ. 'ಭಯ' ಎನ್ನುವಂತಹದ್ದು ಮನುಷ್ಯನ ಉನ್ನತಿಯನ್ನು, ಏಳ್ಗೆಯನ್ನು ಕಸಿದುಕೊಳ್ಳುತ್ತದೆ. ಹಾಗೂ ಚಿತ್ತಾಲರು ಚಿತ್ರಿಸಿರುವ 'ಕಪ್ಪುನಾಯಿ' ಋಣಾತ್ಮಕ ಅಂಶವಾಗಿದ್ದು, ಮನುಷ್ಯನಿಗೆ 'ಕಪ್ಪು' ಎನ್ನುವಂತಹದ್ದು ಅಶುಭದ ಸಂಕೇತವಾಗಿದೆ. ಅದನಿಟ್ಟುಕೊಂಡೆ ಕಪ್ಪುನಾಯಿಯ ಪಾತ್ರದ ಮೂಲಕ ಅಹಲ್ಯೆಗೆ ಮತ್ತೊಂದು ಅವಘಡ ಸಂಭವಿಸಬಹುದೇನೋ ಎಂಬ ಸೂಚನೆಯನ್ನು ನೀಡುತ್ತದೆ. ಪ್ರಕೃತಿಯಲ್ಲಿರುವ ಪ್ರತಿಯೊಂದು ವಸ್ತುಗಳು, ಜೀವಿಗಳು ಮಾನವನು ತನ್ನ ಅನುಕೂಲಕ್ಕೆ ತಕ್ಕಂತೆ ಚಿತ್ರಿಸಿಕೊಂಡಿದ್ದಾನೆ. ಅಹಲ್ಯೆ ಮದುವೆ ಆಗಿ ಗಂಡ ಬಿಟ್ಟಿರುವುದು ಆಕೆ ಕನಸಿನಲ್ಲಿ ಕಂಡ ಕಪ್ಪುನಾಯಿ ಎಂದು ತಿಳಿದ, ಎರಡನೇ ಸಲ ಕಂಡಾಗ ಕೆಟ್ಟ ಘಟನೆಗಳೇನಾದರೂ ನಡೆಯುವುದಕ್ಕೆ ಮುಂಚೆ ತಾನೆ ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ.

ಒಟ್ಟಿನಲ್ಲಿ 'ಕಪ್ಪುನಾಯಿ'ಯು ಕೆಟ್ಟದ್ದು ಎನ್ನುವಂತಹದ್ದು ಹಾಗೂ ಅವಳ ಭಯವೇ ಅವಳ ಅಂತ್ಯಕ್ಕೂ ಕಾರಣವಾಯಿತೆನ್ನುವಂತಹದ್ದನ್ನು ಈ ಕಥೆಯಲ್ಲಿ ಕಾಣಬಹುದು.

"ಭಯ" ಎನ್ನುವುದು ಜೀವನದ ಗುರಿ ಸಾಧನೆಗೆ ತೊಡಕಾಗಬಾರದು.

## ಬೀಗ ಮತ್ತು ಬೀಗದ ಕೈ

**ಕೇಶವ**

ಕೇಶವನು ಆಫೀಸ್ ಒಂದರಲ್ಲಿ ನೌಕರಿಯಾಗಿ ಕೆಲಸಮಾಡತ್ತಿರುತ್ತಾನೆ. ಅದೇ ಆಫೀಸಿನಲ್ಲಿ ಸಂಜೀವಿನಿ ಹುಡುಗಿಯೊಂದಿಗೆ ಪ್ರೀತಿ ಪ್ರೇಮವನ್ನ ಹೊಂದಿರುತ್ತಾನೆ. ಇಬ್ಬರೂ ಸಿನಿಮಾ ಒಂದಕ್ಕೆ ಹೋದಾಗ ಅಲ್ಲಿ ಸಂಜೀವಿನಿಯಲ್ಲಿ ವ್ಯಕ್ತವಾಗುವ ಭಾವನೆಗಳಿಗೆ ಕೇಶವನು ಪ್ರತಿಸ್ಪಂದಿಸದೆ ಭಯ ಪಡುತ್ತಾನೆ. ಇದನ್ನರಿತ ಸಂಜೀವಿನಿ ಬೇಸರಪಡುತ್ತಾಳೆ. ಕೇಶವನು ನನ್ನಿಂದ ಒಂದು ಹೆಣ್ಣನ್ನು ತೃಪ್ತಿಪಡಿಸಲು ಸಾದ್ಯವಿಲ್ಲವೆನ್ನುವ ಭಯದಲ್ಲೆ ಮನೆಗೆ ಬಂದು ಬಾಗಿಲನ್ನ ತೆರೆಯಲು ಬೀಗದ ಕೈ ಹುಡುಕುವಾಗ ಅವನ ಬಳಿ ಇರುವುದಿಲ್ಲ. ಇದೇ ಭಯದಲ್ಲೇ ಸಾವನ್ನು ಕಾಣುತ್ತಾನೆ.

ಇಲ್ಲಿ ಚಿತ್ತಾಲರ ಕೇಶವನ ಬೀಗದ ಕೈಯನ್ನೇ ಆತ್ಮವಿಶ್ವಾಸಕ್ಕೆ ಹೋಲಿಸುತ್ತಾ, ತನ್ನ ಬೀಗದ ಕೈ ಕಳೆದು ಹೋಗಿದೆ ಎಂದು ನೆನದವನಿಗೆ ಆತ್ಮವಿಶ್ವಾಸವೇ ಹುದುಗಿ ಹೋದಂತಾಗಿ ಸಾವನ್ನ ಕಾಣುತ್ತಾನೆ.

ವ್ಯಕ್ತಿಯಲ್ಲಿನ ಭಯ ಆತ್ಮವಿಶ್ವಾಸವನ್ನ ನಾಶಮಾಡುವುದಲ್ಲದೆ ನಮ್ಮ ಮೇಲೆ ನಮಗೆ ಜಿಗುಪ್ಸೆಯನ್ನ ತರಿಸುತ್ತದೆ. ಮನಸ್ಸಿನಲ್ಲಿ ಮಾಡುವ ಬೇಡದ ಆಕೃತಿಗಳ, ವಿಚಾರಗಳು ನಮ್ಮನ್ನ ಗುರಿಯಿಲ್ಲದೆ ಜೀವನವನ್ನಾಗಿಸುತ್ತವೆ. 'ಭಯ' ವ್ಯಕ್ತಿಉಯ ಉದ್ಧಾರವನ್ನು ನುಂಗಿ ಹಾಕಿಬಿಡುತ್ತದೆ.

## ಅಡಿಟಿಪ್ಪಣಿ

೧. “ಕಥೆಯಾದಳು ಹುಡುಗಿ” ಯಶವಂತ ಚಿತ್ತಾಲ
ಪ್ರಿಸಮ್ ಬುಕ್ ಹೌಸ್, ಬೆಂಗಳೂರು – ೨೦೦೯ – ಪುಟ ೬೪

೨. “ಕಥೆಯಾದಳು ಹುಡುಗಿ” ಯಶವಂತ ಚಿತ್ತಾಲ
ಪ್ರಿಸಮ್ ಬುಕ್ ಹೌಸ್, ಬೆಂಗಳೂರು – ೨೦೦೯ – ಪುಟ ೭೧

## ಅಧ್ಯಾಯ – ೬
## ಈ ಸಂಕಲನದ ಕಥೆಗಳ ಆಶಯ

**'ಕಥೆಯಲ್ಲಿ ಬಂದಾತ ಮನೆಗೂ ಬಂದು ಕದ ತಟ್ಟಿದ'**

ಲೇಖಕರ ಮನೆಗೆ ಅಪರಿಚಿತರೊಬ್ಬರ ಆಗಮನದಿಂದಲೇ ಲೇಖಕರ ಮನದಲ್ಲಿ ಹತ್ತಾರು ಅನುಮಾನಗಳು ಮೂಡಲು ಪ್ರಾರಂಭವಾಯಿತು.

ಲೇಖಕರು ಕೂಲಿಯಾಳುಗಳೊಂದಿಗೆ ಹೊಂದಿದ್ದ ಉತ್ತಮ ಭಾಂಧವ್ಯವೆ ಅಪರಿಚಿತನು ಲೇಖಕರನ್ನು ಭೇಟಿಮಾಡಲು ಕಾರಣವಾಯಿತು.

ಲೇಖಕರು ಬರೆದ ಕಥೆಯಲ್ಲಿ ಅಪರಿಚಿತನ ಹೆಸರನ್ನು ಬಳಸಿರುವುದೇ ತಪ್ಪೆಂಬ ಭಾವನೆ ಬೆಳೆಯಲು ಕಾರಣವಾಯಿತು.

ಅಪರಿಚಿತನು ವಿವರಿಸಿದ ಕಥೆ ಲೇಖಕರಿಗೆ ತಿಳೀಯದೆ ಅಸಮಾಧಾನಕ್ಕೆ ಕಾರಣ.

ವೋಮು ತಾನು ಬಂದ ಉದ್ದೇಶವನ್ನು ಲಕೋಟೆಯಲ್ಲಿ ಬರೆದಿರುವುದು.

ಲೇಖಕರ ಎರಡು ದಿನದ ಪ್ರವಾಸ ಎಂಟುದಿನವಾಗುವುದರ ಹಿಂದಿನ ಉದ್ಧೇಶ ತಿಳಿಯುವುದು.

ರಾಜಕಾರಣಿಯೊಬ್ಬನ ಕೈವಾಡವೇ ವೋಮುವಿನ ಕಣ್ಮರೆಗೆ ಕಾರಣವಾಗುವುದು. ವೋಮು ಲೇಖಕರನ್ನು ಭೇಟಿಯಾಗಲು ಬಂದಿರುವ ಉದ್ದೇಶ ತಿಳಿಯುವುದು.

**ಕಥೆಯಾದಳು ಹುಡುಗಿ**

ಹದಿಮೂರು ವರುಷದ ಜಾನಕಿಗೆ ರಕ್ತದ ಕ್ಯಾನ್ಸರ್.

ಜಾನಕಿಯ ಜೋಪಡಿಯಲ್ಲಿ ಅವಳ ಮೇಲೆ ಉಂಟಾದ ಅತ್ಯಾಚಾರ.

ಜಾನಕಿ ಅನುಭವಿಸಿದ ನೋವಿನ ಚಿತ್ರಣದ ಮನಃಸ್ಥಿತಿಯನ್ನು ಕಥೆಯಲ್ಲಿ ಲೇಖಕರು ನೀಡುವುದು.

ಲೇಖಕರ ಕಥೆಯ ಯಶಸ್ಸಿಗೆ ಅವರು ಬರೆದ ಕಥೆ ಸಾಮಾಜಿಕ ಮಹತ್ವವುಳ್ಳದ್ದು ಕಾರಣ.

ಅನಾಥಾಶ್ರಮದಿಂದ ಹೆಣ್ಣುಮಗುವೊಂದು ದತ್ತು ಪಡೆಯುವುದು. ಆ ಮಗುವಿಗೆ ಜಾನಕಿ ಎಂದು ನಾಮಕರಣ ಮಾಡಿ ಹುಟ್ಟುಹಬ್ಬಕ್ಕೆ ಸ್ನೇಹಿತರೆಲ್ಲರನ್ನು ಆಹ್ವಾನಿಸುವುದು.

## ತ್ರಯೋದಶ ಪುರಾಣ

'ಹದಿಮೂರನೇ ಸಂಖ್ಯೆಯನ್ನು ಹೊಂದಿರುವುದೇ ಕಥೆಯ ವಸ್ತುವಾಗಿರುವುದು.

ಹದಿಮೂರು ವರುಷದ ಗಣೇಶ ಹಾಗೂ ಸ್ನೇಹಿತ ಗೋಪಾಲ ಹೋಟೆಲ್ ಒಂದರಲ್ಲಿ ಮಾಣಿಗಳಾಗಿ ಕೆಲಸ.



ಗೋಪಾಲನ ಕಿರಿಕಿರಿ ಮಾತುಗಳೇ ಗಣೇಶ ಮಾಣಿ ಕೆಲಸವನ್ನು ಬಿಡಲು ಕಾರಣವಾಯಿತು.

ಅಪರಿಚಿತನೊಬ್ಬನು ಗಣೇಶನನ್ನು ಭೇಟಿಯಾಗುವುದು ಹನೇಹಳ್ಳಿ ಬಿಟ್ಟು ಕೊಲ್ಲಾಮರಕ್ಕೆ ಬಂದದ್ದು. ಅಲ್ಲಿ ಸಂಭವಿಸಿದ ಅವಘಡದಿಂದ ಗಣೇಶ ಮುಂಬಯಿಗೆ ಬಂದದ್ದು.

ತಾನು ಕೆಲಸ ಮಾಡುತ್ತಿದ್ದ ಕೊರಿಯರ್ ಸಂಸ್ಥೆ ದೊಡ್ಡ ಸ್ಮಗಲರ್ಸ್ ಸಂಸ್ಥೆ ಎಂದು ತಿಳಿಯುವುದು.

## ಅಶ್ವತ್ಥಾಮ

ರಾಮಚಂದ್ರ ಹಾಗೂ ಮನೆಗೆಲಸ ವಾಸು ಇಬ್ಬರ ನಡುವಿನ ಸಂಬಂಧ.

ರಾಮಚಂದ್ರನಿಗ ವೀಣಾಳೊಂದಿಗಿನ ಪ್ರೀತಿ ಸಂಬಂಧದ ಬಗ್ಗೆ ಅನುಮಾನ ಮೂಡುವುದು.

ಲೇಖಕರು ಸಾರಕ್ಕನ ಮೇಲೆ ಹೊಂದಿದ್ದ ಪ್ರೀತಿ ವೀಣಾಳ ಅಸೂಯೆಗೆ ಕಾರಣವಾಗುವುದು.

ನೋಶೀರನ ನಿರ್ಗಮನದಿಂದ ರಾಮಚಂದ್ರ ವಾಸುವಿನೊಡನೆ ತಾನೆ ಕುರಿತು ಬರೆದುದ್ದನ್ನು ಓದುವುದು.

ರಾಮಚಂದ್ರನೆ ತಾನೆ ಬರೆದುದ್ದನ್ನು ಓದಿದಾಗ ಅವನಿಗೆ ಗಾಬರಿ.

## ಮುಖಾಮುಖಿ

ಲೇಖಕರ ಹನೇಹಳ್ಳಿಯಲ್ಲಿನ ಇಂದಿರಕ್ಕನೊಂದಿಗಿನ ನೆನಪುಗಳು.

ಇಂದಿರಕ್ಕನೊಂದಿಗೆ ಶಂಕರರಾಯನ ಮದುವೆ ಪೊತ್ತೆ ಮೀಸೆಯವನ ಆಗಮನ.

ಪೊತ್ತೆಮೀಸೆಯವನು ಕೊಟ್ಟ ಪತ್ರವನ್ನು ಲೇಖಕರು ಹರಿದು ಹಾಕುವುದು.

ಲೇಖಕರು ಮುಂಬೈ ಪ್ರಪಂಚಕ್ಕೆ ಬರುವುದು.

ಪೊತ್ತೆ ಮೀಸೆಯವನು ಯಾರು? ಎಂಬುದು ತಿಳಿಯುವುದು ಇಂದಿರಕ್ಕನನ್ನ ಮನೆಗೆ ಕರೆದುಕೊಂಡು ಹೋಗಲು ಲೇಖಕರು ಹಾಗೂ ಹೆಂಡತಿಯು ಕಾಯುತ್ತಿರುವುದು.

ಲೇಖಕರಿಗೆ ಇಂದಿರಕ್ಕನ ಸಾವಿನ ಸುದ್ದಿ ತಿಳಿಯುವುದು.

## ಚಕ್ರವ್ಯೂಹ

ಲೇಖಕರು ನ್ಯೂಯಾರ್ಕ್ ನಗರದಲ್ಲಿ ಲೂಸಿಯಾಳೊಂದಿಗೆ ಹೊಂದಿದ್ದ ಸಂಬಂಧ ಪ್ರಾರಂಭದಲ್ಲೇ ತಿಳಿಯುವುದು.

ಬ್ಲೂ ಸಿನಿಮಾ ನೋಡಿಕೊಂಡು ಬರುವಾಗ ಲೇಖಕರು ವೇಶ್ಯೆಯೊಬ್ಬಳಿಂದ ತಪ್ಪಿಸಿಕೊಳ್ಳುವುದಕ್ಕೆ ಕಾರಣ ಲೂಸಿಯಾಳ ಪ್ರೇಮಪಾಶ ಕಾರಣವಾಗುವುದೇ ಎಂಬುದನ್ನು ನೆನೆಯುವುದು.

ಮಹಾಭಾರತದ ಚಕ್ರವ್ಯೂಹ ಯುದ್ಧದ ನೆನಪಿನೊಂದಿಗೆ ತನ್ನ ಜೀವನದ ನೆನಪುಗಳನ್ನು ಕಾಕತಾಳಿಯವಾಗಿ ನೋಡುವುದು.

ಮುಂಬೈನ ಭೂತಕಾಲದ ನೆನಪುಗಳು ಲೇಖಕರನ್ನು ವರ್ತಮಾನದ ಜ್ಞಾನೋಧಯಕ್ಕೆ ಕಾರಣವಾಗುವುದು.

ಲೂಯಿಸಾ ಹಾಗೂ ಲೇಖಕರಿಬ್ಬರೂ ಮನೆಯ ಬಳಿಗೆ ಸದ್ದಿಲ್ಲದೆ ಹೋಗುವುದು.

## ಉದ್ಧಾರ

ಅಹಲ್ಯೆಯ ತಾಯಿ ಮನೆಯಲ್ಲಿ ಇಲ್ಲದಿರುವುದೇ ಅವಳ ಬಯ? ಆತಂಕಕ್ಕೆ ಕಾರಣವಾಗುವುದು.

ಪ್ರಕೃತಿಯಲ್ಲುಂಟಾಗುವ ಕತ್ತಲೆ, ಮಳೆ, ಜೋರಾಗಿ ಬೀಸುವ ಗಾಳಿಯಿಂದ ಅಹಲ್ಯೆಯ ಭಯ ಹೆಚ್ಚವುದು.

ಅಹಲ್ಯೆಗೆ ಕಪ್ಪು ನಾಯಿಯ ದರ್ಶನದಿಂದ ಅವಳ ಜೀವನದಲ್ಲಿ ನಡೆದ ಭೂತಕಾಲದ ಕಹಿ ಘಟನೆಗಳು ನೆನಪು ಮರುಕಳಿಸುವುದೇ ಅವಳ ಆತ್ಮಹತ್ಯೆಗೆ ಕಾರಣವಾಗುವುದು.

## ಬೀಗ ಮತ್ತು ಬೀಗದ ಕೈ

ಕೇಶವನು ಬೀಗದ ಕೈ ಒಂದಿಗೆ ಆಫೀಸಿಗೆ ತೆರಳವುದು. ತಾಯಿಯಂತಿದ್ದ ಲಾಕಡವಾಳಲು ಕೊಟ್ಟ ಸಿನಿಮಾ ಟಿಕೇಟುಗಳು.

ಸಂಜೀವಿನಿ ವ್ಯಕ್ತ ಪಡಿಸಿದ ಭಾವನೆಗಳಿಗೆ ಕೇಶವ ಪ್ರತಿಸ್ಪಂದಿಸದೆ ಇರುವುದು.

ಸಂಜೀವಿನಿ ಬೇಸರಗೊಳ್ಳುವುದಕ್ಕೆ ಕಾರಣವಾಗುವುದು.

ಸಂಜೀವಿನಿಯ ಬೇಸರಿಕೆಯ ಕೇಶವನ ಆತ್ಮವಿಶ್ವಾಸ ಕುಸಿಯಲು ಕಾರಣ.

ಕೇಶವನು ಕುಗ್ಗಿದ ಆತ್ಮವಿಶ್ವಾಸ ಬೀಗದ ಕೈ ಕಳೆದಿರುವುದೇ ಕೇಶವನ ಸಾವಿಗೆ ಕಾರಣವಾಗುವುದು.

# ಅಧ್ಯಾಯ ೭

## ಈ ಸಂಕಲನದ ಕಥೆಗಳ ಒಟ್ಟು ನೋಟ – ಸಮಾರೋಪ

ಕಥೆಯಾದಳು ಹುಡುಗಿ ಕಥಾ ಸಂಕಲನವು ಮೂರು ಭಾಗಗಳನ್ನು ಒಳಗೊಂಡಿದೆ. **ವರ್ತಮಾನ, ಇತಿಹಾಸ ಹಾಗೂ ಪುರಾಣದ** ರೀತಿಗಳಲ್ಲಿ ಕಥೆಗಳನ್ನು ನಿರೂಪಿಸಲಾಗಿದೆ.

ವರ್ತಮಾನ ಭಾಗದ ಕಥೆಯಲ್ಲಿ 'ಕಥೆಯಲ್ಲಿ ಬಂದಾತ ಮನೆಗೂ ಬಂದು ಕದ ತಟ್ಟಿದ' ಕಥನ ನಿರೂಪಣೆಯಲ್ಲಿ ಲೇಖಕರು ಅವರಿಗರಿವಿಲ್ಲದೆಯೆ ಅನುಭವಗಳು, ಘಟನೆಗಳು ನಡೆಯುತ್ತಾ ಹೋಗಿ ಅವನು ವರ್ತಮಾನದ ಮನಸ್ಥಿತಿಯನ್ನು ತಿಳಿಯುವಲ್ಲಿ ಹಾಗೂ ಲೇಖಕನ ಅಹಂನಿಂದಲೋ ಎನ್ನುವಂತೆ ಪರಿಸ್ಥಿತಿ ಕೈಮೀರಿ ಹೋಗಿ ದುರಂತ ಕಥೆಯಾಗಿ ಉಳಿಯುತ್ತದೆ.

ಇನ್ನು ಎರಡನೆಯ ಭಾಗವಾದ **ಇತಿಹಾಸದ** ಕಥೆಗಳು ಸಮಾಜದ ನಿಷ್ಠಾವಂತ ವ್ಯಕ್ತಿಯೊಬ್ಬ (ಲೇಖಕ) ಕಣ್ಣಿಟ್ಟು ಸಮಾಜದಲ್ಲಿ ನಡೆಯುವಂತಹ ಅಕ್ರಮ, ಅನ್ಯಾಯಗಳನ್ನು ತಡೆಯಲು ಅಥವಾ ಆ ಸಮಾಜದ ಕಣ್ಣನ್ನು ತೆರೆಸಲು ವ್ಯಕ್ತಿಯೊಬ್ಬ ಅನುಭವಿಸುವಂತಹ ಅನುಭವಗಳು ಎದುರಾಗುವಂತಹ ಸಮಸ್ಯೆಗಳು ಇತ್ಯಾದಿಯನ್ನು ಕುರಿತದ್ದಾಗಿವೆ. ಇದೊಂದು ಸಮಾಜದ ದುರಂತ ವ್ಯವಸ್ಥೆ ಹಾಗೂ ಸಂವೇದನಾಶೀಲ ವ್ಯಕ್ತಿಯೊಬ್ಬನ ದುರಂತವೂ ಹೌದು.

ಈ ಸಂಕಲನದ ಎಂಟು ಕಥೆಗಳ ಕಥಾ ವಸ್ತುಗಳು ಒಂದೊಂದು ರೀತಿಯ ಸಂದೇಶವನ್ನು ಹೊಂದಿದ್ದು, ಪಾತ್ರಗಳು ಅಂತ್ಯ ಕಂಡರು ಅದರ ಹಿಂದಿನ ಉದ್ದೇಶವು ನಾವು ನಮ್ಮಲ್ಲಿನ ದೋಷಗಳನ್ನು ತಿದ್ದುಕೊಂಡು ಸಮಾಜದ ಹಿತ ಕಾಯುವ ಉದ್ದೇಶವನ್ನು ಹೊಂದಿದೆ.

*** ಕಥೆಗಳು ಸಮಾಜದ, ಸಮಸ್ಯೆಗಳನ್ನು ಒಳಗೊಂಡಿದೆ**

'ಕಥೆಯಾದಳು ಹುಡುಗಿ' ಸಂಕಲನವು ದುಷ್ಟ ಸಮಾಜದ ಕರಾಳ ಸ್ವರೂಪಗಳನ್ನು

ಒಳಗೊಂಡಿರುವ ಸಂಕಲನವಾಗಿದೆ. ಚಿತ್ತಾಲರ ಬರವಣಿಗೆಯಲ್ಲಿ ಸ್ಪಷ್ಟವಾಗಿ ಮೂಡುವುದು ಸಾಮಾಜಿಕ ಪ್ರಕ್ರಿಯೆಗಳಲ್ಲಿ ಅವರಿಗಿಉರುವ ಆಸ್ಥೆ. ಸಮಾಜದ ಕಂದಕಗಳನ್ನು ಕಂಡಲ್ಲಿ ಅವುಗಳಿಗೆ ತಮ್ಮ ಲೇಖನದ ಮೂಲಕ ಸ್ಪರ್ಶತೆಯನ್ನು ನೀಡಿ ಸಮಾಜಕ್ಕೆ, ಸಮುದಾಯದ ಜನರಿಗೆ ಮುಟ್ಟಿಸುವುದಾಗಿದೆ. ಅಲ್ಲದೆ ಈ ಸಂಕಲನವು ನಮ್ಮಲ್ಲಿರುವ ಸಮೂಹ ಪ್ರಜ್ಞೆಗಳನ್ನ ಕಥೆಗಳ ಮೂಲಕ ನೀಡುತ್ತಿವೆ. ವ್ಯಕ್ತಿಯ ಅರಿವಿನಿಂದಲೋ, ಅರಿವಿಲ್ಲದೆಯೋ ನಡೆಯುವ ಕೃತ್ಯಗಳು ಕೊನೆಗೆ ಯಾವ ರೀತಿಯ ಹಂತವನ್ನ ತಲುಪುತ್ತವೆ ಎಂಬುದನ್ನು ತಿಳಿಯ ಹೇಳುತ್ತದೆ.

*** ಮಾನಸಿಕ, ಮಾರ್ಕ್ಸ್‌ವಾದ, ವಿಕಾಸವಾದ, ಮಾನವೀಯತೆಯ ಸಿದ್ಧಾಂತದ ಮೇಲೆ ರಚಿತವಾಗಿದೆ.**

ಈ ಸಂಕಲನವು ಮಾನವತವಾದದ ಮೇಲೆ, ಮಾರ್ಕ್ಸ್‌ವಾದ ಹಿನ್ನಲೆಯಲ್ಲಿ, ಮಾನವೀಯತೆಯ ನೆಲೆಯಲ್ಲಿ ರಚಿತವಾಗಿದ್ದು; ಮಾನವನು ತನ್ನ ಆಸೆಗಳಿಗೆ, ಅಭಿರುಚಿಗಳಿಗೆ ಬೆಲೆ ಕೊಡುತ್ತಾ, ತನ್ನ ತನವನ್ನು ಹಾಗೂ ಮುಟ್ಟಬೇಕಾಗಿರುವ ಗುರಿಯನ್ನ ಮರೆತು ತಾನುತೋಡಿಕೊಳ್ಳುವ ಗುಂಡಿಗೆ ತಾನೇ ಬೀಳುವ ಪರಿ. ಬದುಕಿನಲ್ಲಿ ಆಕಸ್ಮಿಕವಾಗಿ ನಡೆಯುವ ಘಟನೆಗಳು ಜೀವನದಲ್ಲಿ ಎಂತಹ ಬಿರುಗಾಳಿಯನ್ನು ಎಬ್ಬಿಸುತ್ತವೆ ಎಂಬುದನ್ನು ದರ್ಶಿಸುತ್ತವೆ.

ವ್ಯಕ್ತಿಯು ಸಮಾಜಮುಖಿಯಾದ ಮೇಲೆ ಸಮಾಜದ ಚೌಕಟ್ಟಿನ ನೆಲೆಯಲ್ಲಿ ಜೀವಿಸಬೇಕಾಗುತ್ತದೆ. ಮಾನವತವಾದವನ್ನ ಅರಿತಿರಬೇಕಾಗುತ್ತದೆ. ಸಮಾಜದಲ್ಲಿ ತಾನು ಒಂದು ಸ್ಥಾನವನ್ನು ಕಂಡುಕೊಳ್ಳಬೇಕಾದರೆ ಸಾಮಾಜಿಕ ನೆಲೆಗಟ್ಟಿನಲ್ಲಿ ತನ್ನ ತನವನ್ನ ಕಾಯ್ದು ಕೊಳ್ಳಬೇಕಾಗುತ್ತದೆ. ಈ ನಿಟ್ಟಿನಲ್ಲಿ ಕಾರ್ಯ ನಿರ್ವಹಿಸಿದರೆ ಮಾತ್ರ ಉತ್ತಮ ಸಮಾಜದ ನಿರ್ಮಾಣವಾಗುತ್ತದೆ.

ಸಮುದಾಯ ಒಳಿತಿಗಾಗಿಯೇ ಚಿತ್ತಾಲರು ಸಮಾಜದ ಸಮಸ್ಯೆಗಳನ್ನ ಪಾತ್ರಗಳ ಮೂಲಕ ಎತ್ತಿ ತೋರಿಸುವ ಕಾರ್ಯವನ್ನು ಈ ಸಂಕಲನದ ಮೂಲಕ ಮಾಡಿದ್ದಾರೆ.

*** ಪ್ರತಿಯೊಂದು ಕಥೆಯ ನಾಯಕ–ನಾಯಕಿಯರಿಗೆ ಸ್ಥಾನವನ್ನು ನೀಡುವಂತದಾಗಿದೆ**

ಈ ಸಂಕಲನದ ಕಥೆಗಳಲ್ಲಿ ನಾಯಕ–ನಾಯಕಿಯರು ಕಥೆಗಳಲ್ಲಿ ತಮ್ಮ ಜೀವವನ್ನು ಕಳೆದುಕೊಂಡು ಸಾವನ್ನು ದರ್ಶಿಸಿದರೂ, ಪಾತ್ರಗಳಲ್ಲಿ ಜೀವಂತಿಕೆಯನ್ನ ಉಳಿಸಿಕೊಳ್ಳುವ

ಮೂಲಕ ಸಮಾಜದ ವ್ಯವಸ್ಥೆಯಲ್ಲಿ ಉಳಿದಿರುತ್ತಾರೆ. ಸಮುದಾಯದಿಂದಲೇ ಮಾಯವಾಗಿರುವ ಮೌಲಿಕ ವಿಚಾರಗಳನ್ನು ಕಥೆಗಳ ಪಾತ್ರಗಳ ಮೂಲಕ ಸೃಷ್ಟಿಸಿ, ನಮ್ಮಲ್ಲಿ ಅಳವಡಿಸಿಕೊಳ್ಳಬೇಕಾದ ಮೌಲ್ಯಗಳನ್ನು, ಮರೆಯಾಗಿರುವ ಮಾನವೀಯತೆಯನ್ನು ಭಾವನೆಗಳ ಮೂಲಕ ಎಚ್ಚರಿಸುವ ಕಾರ್ಯವನ್ನು ಮಾಡಿದ್ದಾರೆ.

ವ್ಯಕ್ತಿಯ ಜೀವನದಲ್ಲಿ ಕಾಣುವ ಗತಿಗಳು, ಏರುಪೇರುಗಳನ್ನು, ಚಿತ್ತಾಲರು ಪಾತ್ರಗಳ ನಾಯಕ-ನಾಯಕಿಯರ ಮೂಲಕ ತೋರಿಸುತ್ತಾ ವ್ಯಕ್ತಿಯೂ ತಾನು ಹಾಕಿಕೊಂಡು ಬಾಳಬೇಕಾದ ಮೌಲ್ಯಯುತ ಚೌಕಟ್ಟಿನಲ್ಲಿ ಬಾಳದೆ, ಆ ಚೌಕಟ್ಟಿನ ಆಚೆ ಬಂದರೆ, ಅಂತ್ಯವು ಘೋರವಾಗಿರುತ್ತದೆ ಎಂಬುದನ್ನ ಹೇಳಿದ್ದಾರೆ.

*** ಈ ಮೂಲಕ ಸಮಾಜವನ್ನು, ಸಮುದಾಯದ ಜನರನ್ನು ತಿದ್ದುವ ಪರಿಯಾಗಿದೆ.**

ಕಥೆಗಳ ಮೂಲಕ ಪಾತ್ರಗಳಲ್ಲಿ, ಕಂಡಿರುವ ಅವನತಿಯನ್ನ ಹಾಗೂ ಹಿಡಿದಿಟ್ಟಿರುವ ಸಂದೇಶವನ್ನು ಸಮಾಜಕ್ಕೆ ತಲುಪಿಸುವ ಕಾರ್ಯವನ್ನ ಮಾಡಿದ್ದಾರೆ.

ಸಾಹಿತಿಗಳ ಸಾಹಿತ್ಯದ ಕಾರ್ಯವೇ ಇಷ್ಟೆ ಸಮಾಜವನ್ನ ನಿರಂತರ ಪ್ರಕ್ರಿಯೆಗೆ ಒಳಪಡಿಸುವ ಮೂಲಕ, ಸಾಹಿತ್ಯದಿಂದ ಸಮಾಜವನ್ನ ತಿದ್ದುವ ಕಾರ್ಯವನ್ನು ಮಾಡುತ್ತಲೇ ಬಂದಿದ್ದಾರೆ. ಸಮಾಜದ, ಸಮುದಾಯದ ಜನರನ್ನು ಆತ್ಮ ವಿಮರ್ಶಗೆ ಒಳಪಡಿಸುವ ನಮ್ಮನ್ನು ಚಿತ್ತಾಲರು ಸರಿಯಾದ ದಾರಿಗೆ ತರಲು ಯತ್ನಿಸಿದ್ದಾರೆ. ಓದುಗರು ಅವರನ್ನ ಆತ್ಮವಿಮರ್ಶೆ ಮಾಡಿಕೊಳ್ಳಲಿ ಎಂಬ ಸಕರಾತ್ಮಕ ಉದ್ದೇಶದಿಮದ ಚಿತ್ತಾಲರು ಈ ಸಂಕಲವನ್ನ ರಚಿಸಿರಬಹುದು.

*** ವ್ಯಕ್ತಿಕೇಂದ್ರಿತವಾಗಿ ಕಂಡರೂ, ಸಮುದಾಯದ ಕಳಕಳಿಯನ್ನ ಹೊಂದಿದೆ.**

ಕಥೆಗಳು ವ್ಯಕ್ತಿಗತವಾಗಿದ್ದರೂ, ಸಮುದಾಯವನ್ನು ದೃಷ್ಟಿಯಲ್ಲಿಟ್ಟುಕೊಂಡು ರಚಿಸಿದ ಸಂಕಲನವಾಗಿದ್ದು, ಕಥೆಗಳು ಕೇವಲ ನಾಯಕ ನಾಯಕಿಯರ ಸುತ್ತ ಹೆಣದಿರುವ ಕಥೆಗಳಂತೆ ಕಂಡರೂ, ಸಮಾಜಕ್ಕೆ ಸಂದೇಶವನ್ನು ನೀಡುವ ಕಾರ್ಯವನ್ನು ಮಾಡುತ್ತಿದೆ.

ಸಂಕಲನದಲ್ಲಿನ ಪ್ರತಿಯೊಂದು ಪಾತ್ರಗಳಲ್ಲಿನ ವ್ಯಕ್ತಿಗಳ ಭಾವನೆಗಳು, ಘಟನೆಗಳು- ಇದರ ಸುತ್ತ ಹೆಣದಿರುವ ಕಥೆಗಳಾದರು ಸಮುದಾಯದಲ್ಲಿನ ಜನರ ಮನಸ್ಸಿಗೂ ಹಾಗೂ ಸಮುದಾಯದಕ್ಕೂ ನಡುವೆ ಏರ್ಪಡುವ ಬಾಂಧವ್ಯಗಳು, ಒಡನಾಟಗಳು ಬದುಕಿನ ಏರುಪೇರುಗಳೇ ವ್ಯಕ್ತಿಯ ಸ್ಥಾನವನ್ನು ಗುರುತಿಸುತ್ತವೆ. ಚಿತ್ತಾಲರು ಇವೆಲ್ಲವನ್ನಿಟ್ಟುಕೊಂಡು

ರಚಿಸುವ ಸಂಲಕನವೇ ಇದು. ಆದ್ದರಿಂದ ಈ ಸಂಕಲನವು ವ್ಯಕ್ತಿಯೂ ತನ್ನನ್ನು ತಾನು ಪಾತ್ರಗಳ ಮೂಲಕ ಕಾಣಿಸಿಕೊಳ್ಳುವಂತೆ ಸಮಾಜದಲ್ಲಿನ ಕಂದಕಗಳನ್ನು ತೋರಿಸುವ ಪ್ರಯತ್ನವಾಗಿದೆ.

* ಮಾನವನಲ್ಲಿ ಅಡಗಿರುವ ಮಾನವೀಯ ಮೌಲ್ಯಗಳನ್ನ ಬಡಿದೆಬ್ಬಿಸುವುದಾಗಿದೆ.

ಮಾನವನಲ್ಲಿ ಹುದುಗಿರುವ ಮಾನವೀಯ ಮೌಲ್ಯಗಳನ್ನ ಪಾತ್ರಗಳ ಮೂಲಕ ತಿಳಿಸುತ್ತಾ ಹೃದಯದಾಳದಲ್ಲಿ ಅಡಗಿರುವ ಸಾಮಾಜಿಕ ಪ್ರಜ್ಞೆಯನ್ನ ಎಬ್ಬಿಸುವ ಕಾರ್ಯವನ್ನು ಈ ಸಂಕಲನದಲ್ಲಿ ಮೂಡಿದೆ.

ವ್ಯಕ್ತಿಯೂ ಹತ್ತಾರು ಭಾವನೆಗಳನ್ನು, ನೂರಾರು ಬಯಕೆಗಳನ್ನ ಆಶಾ ಗೋಪುರವನ್ನೇ ಹೊಂದಿರುವ ಖಣಜನಾಗಿದ್ದಾನೆ. ಜೀವನವನ್ನ ಸಾಗಿಸುತ್ತಾ ಕೇವಲ ಪಕ್ಷಪಾತಿಯಂತೆ ಜೀವಿಸುತ್ತಾ ಸಮಾಜದ ಆಗುಹೋಗುಗಳಿಗೆ ಸ್ಪಂದಿಸದೆ ಸ್ವಾರ್ಥ ಜೀವನವನ್ನು ನಡೆಸುತ್ತಿದ್ದಾನೆ. ಆದ್ದರಿಂದಲೇ ಚಿತ್ತಾಲರು ಮನುಷ್ಯನಲ್ಲೇ ಅಡಗಿಕುಳಿತಿರುವ ಮಾನವೀಯತೆಯನ್ನ ಇಂತಹ ಪಾತ್ರಗಳನ್ನ ಸೃಷ್ಟಿಸಿ ಆ ಮೂಲಕ ನಮ್ಮನ್ನು ಸಮುದಾಯದ ಒಳಿತನತ್ತ ಕರೆದುಕೊಂಡು ಹೋಗುವ ಒಂದು ಪ್ರಯತ್ನವೇ ಸರಿ.

* ಈ ಕಥೆಗಳಲ್ಲಿನ ಪಾತ್ರಗಳು ಜೀವಂತವಾಗಿರುವುದರಿಂದ ವ್ಯಕ್ತಿಯೊಬ್ಬನು ಕಿವಿಗೊಟ್ಟು ಕೇಳಿಸಿಕೊಳ್ಳಬೇಕಾದ ಜೀವನ ದರ್ಶನವಾಗಿದೆ.

ವ್ಯಕ್ತಿಯೂ ಬದುಕಿನ ದಾರಿಯನ್ನು ಸುಗಮದಿಂದ ಸಾಗಿಸಬೇಕಾದರೆ ಅವನಲ್ಲಿ ಕೆಲವೊಂದು ಜೀವನದ ಮೌಲ್ಯಗಳಿದ್ದರೆ ಮಾತ್ರ ಸಾಧ್ಯ. ಅವುಗಳನ್ನು ಕೆಲವೊಮ್ಮೆ ಆಂತರ್ಯದ ಅನುಭವದಿಂದಲೋ ಬೇರೆಯವರ ಮೂಲಕವೊ, ಇನ್ನು ಕೆಲವೊಮ್ಮೆ ಕೇಳಿಯೊ, ಓದಿಯೊ ತಿಳಿದುಕೊಳ್ಳುತ್ತಾನೆ.

ಚಿತ್ತಾಲರ ಈ ಸಂಕಲನವು ಅಂತಹ ಕಾರ್ಯವನ್ನು ಮಾಡಿದೆ. ಸಾಹಿತ್ಯಾಸಕ್ತರು ತಮ್ಮ ಸಾಹಿತ್ಯಾಭಿರುಚಿಯನ್ನು ಈ ರೀತಿಯ ಕಥೆಗಳನ್ನು ಓದುವುದರಿಂದ ಆಸ್ಥೆಯನ್ನು ಹಾಗು ತಮ್ಮಲ್ಲೂ ಬದಲಾವಣೆಗೊಳ್ಳಲು ಬೇಕಾದ ಗುಣವಿದ್ದರೆ ಪಾತ್ರಗಳ ಮೂಲಕ ಬದಲಾಯಿಸಿಕೊಳ್ಳುವ ಮೂಲಕ, ಅದೇ ಪಾತ್ರಗಳ ಮೂಲಕ ತಮ್ಮನ್ನು ಕಾಣುತ್ತಾರೆ. ವ್ಯಕ್ತಿಯ ಈ ಬದಲಾವಣೆಯಿಂದ ಸಮಾಜವು ಒಳಿತನ್ನು ಕಾಣವುದರಿಂದ ಪಿಡುಗಿನಿಂದ ಕೂಡಿರುವ ಸಮಾಜವು ಪಿಡುಗು ಮುಕ್ತ ಸಮಾಜವಾಗುತ್ತದೆ.

*** ಹಳ್ಳಿ ಎಂದರೆ ಹನೇಹಳ್ಳಿ, ನಗರ ಪ್ರದೇಶವೆಂದರೆ ಮುಂಬೈ ನಗರದಂತಹ ಪ್ರದೇಶಗಳ ಜನರ ಮನಸ್ಥಿತಿಯ ಚಿತ್ರಣವಾಗಿದೆ.**

ಚಿತ್ತಾಲರು ರಚಿಸಿರುವ ಕೃತಿಗಳು ಹಾಗೂ ಪಾತ್ರಗಳಲ್ಲೆವು ಹನೇಹಳ್ಳಿ ಹಾಗೂ ಸುತ್ತಮುತ್ತಲಿನ ಪ್ರದೇಶಗಳ ಹಾಗೂ ಮುಂಬೈ ನಗರಜೀವನದ ಪ್ರಭಾವದಿಂದ ರಚಿತವಾಗಿರುವಂತಹದ್ದು. ಅಲ್ಲಿನ ಜನ ಜೀವನ ಶೈಲಿ, ಭಾವನೆಗಳು, ವ್ಯಕ್ತಿಗಳು ಕಂಡುಂಡ ಅನುಭವಗಳನ್ನ ಚಿತ್ತಾಲರ ಪಾತ್ರಗಳ ಮೂಲಕ ಸೃಷ್ಟಿಸಿ – ಹಳ್ಳಿ ಹಾಗೂ ನಗರ ಪ್ರದೇಶದ ಜನರ ಜೀವನದ ವಾಸ್ತವ ಚಿತ್ರಣವನ್ನ ತೋರಿಸಿದ್ದಾರೆ.

*** ಮಾನವನ ಪಾಪಪ್ರಜ್ಞೆಯನ್ನು ಎಚ್ಚೆತ್ತುಕೊಳ್ಳುವಂತೆ ಮಾಡುತ್ತವೆ.**

ಜೀವನವನ್ನು ಸಾಗಿಸುತ್ತ ಜೀವನದಲ್ಲೇ ಮುಳುವಾಗಿರುವ ನಮಗೆ ನಮ್ಮ ಭೂತ ಕಾಲದ ಜೀವನದಲ್ಲಿ ನಡೆದ ಅನೇಕ ಘಟನೆಗಳನ್ನು ಈ ಸಂಕಲನವು ಮರುಕಳಿಸುವಂತಹ ಕಾರ್ಯ ಮಾಡುತ್ತದೆ. ಜೀವನದಲ್ಲಿ ನಡೆದ ಸಿಹಿ – ಕಹಿ ಘಟನೆಗಳಲ್ಲಿ ಕೆಲವೊಮ್ಮೆ ಕಹಿ ಘಟನೆಗಳ ಅನುಭವವು ಮಾಸದಂತೆ ಆಗಾಗ ನಮ್ಮ ಸ್ಮೃತಿ ಮೂಲದಲ್ಲಿ ಚಿತ್ರೌಛಾಯೆಯನ್ನ ಮೂಡಿಸಿ ನಮ್ಮಲ್ಲಿನ ಪಾಪಪ್ರಜ್ಞೆಯನ್ನು ಎಚ್ಚತ್ತುಕೊಳ್ಳುವಂತೆ ಮಾಡುತ್ತದೆ.

*** ಕಥೆಗಳ ಪಾತ್ರಗಳ ಮೂಲಕ ಭ್ರಮಾ ಲೋಕದಲ್ಲಿದ್ದರೊ ನಮ್ಮ ವಾಸ್ತವ ಜೀವನದ ಚಿತ್ರಣವನ್ನ ತೋರಿಸುತ್ತದೆ.**

ಈ ಸಂಕಲನವನ್ನು ಓದುತ್ತಾ ಓದುತ್ತಾ ನಾವು ಪಾತ್ರಗಳ ಮಧ್ಯೆ ಒಬ್ಬರಾಗಿ, ಕಲ್ಪನೆಯ ಲೋಕದಲ್ಲಿರುವಂತೆ ಮಾಡಿ, ಕಥೆ ಮುಗಿದ ನಂತರವೇ ನಮಗೆ ವರ್ತಮಾನವೇ ಅನುಭವಕ್ಕೆ ಬರುವುದು. ಅಲ್ಲಿಯವರೆಗೂ ನಾವು ಪಾತ್ರಗಳ ಮಧ್ಯೆ ಒಬ್ಬರಾಗಿರುವಂತೆ ತೋರುತ್ತದೆ.

ಒಟ್ಟಿನಲ್ಲಿ ಈ ಸಂಕಲನವು ಮೇಲಿನ ಎಲ್ಲ ಅಂಶಗಳನ್ನ ಒಳಗೊಂಡು ರಚಿತವಾದ ಒಂದು ಅದ್ಭುತ ಸಂಕಲನವಾಗಿದೆ ಎಂಬುದರಲ್ಲಿ ಸಂದೇಹವಿಲ್ಲ.

## ಪರಾಮರ್ಶನ ಗ್ರಂಥಗಳು


೧. "ಕಥೆಯಾದಳು ಹುಡುಗಿ" ಯಶವಂತ ಚಿತ್ತಾಲ
ಪ್ರಿಸಮ್ ಬುಕ್ ಹೌಸ್, ಬೆಂಗಳೂರು – ೨೦೦೭ – ಪುಟ ೯

೨. ಸಾಹಿತ್ಯ ಸೃಜನಶೀಲತೆ ಮತ್ತು ನಾನು– ಯಶವಂತ ಚಿತ್ತಾಲ
ಜ್ಯೋತಿಷ್ಮತಿ ಪ್ರಕಾಶನ, ಅಜ್ಜರಕಾಡು, ಉಡುಪಿ, ದ.ಕ. ೧೯೮೩

೩. ಸಮಗ್ರ ಕಥೆಗಳು ಸಂಪುಟ – ೨, ಯಶವಂತ ಚಿತ್ತಾಲ
ಆಟ: ಯಶವಂತ ಚಿತ್ತಾಲ – ಕಥಾಸಿದ್ಧಿ – ಶಾಂತಿನಾಥ ದೇಸಾಯಿ
ಪುಟ(೧೧೬೯)

೪. ಸಮಗ್ರ ಕಥೆಗಳು – ಸಂಪುಟ – ಪಿ.ಆರ್. ಮುತ್ತಾಲಿಕ್
ಪ್ರಿಸಮ್ ಬುಕ್ಸ್ ಪ್ರೈ. ಲಿ – ೨೦೧೨
ಪುಟ ೧೧೯೮

೫. ಸಾಹಿತ್ಯ ಸೃಜನಶೀಲತೆ ಮತ್ತು ನಾನು – ಯಶವಂತ ಚಿತ್ತಾಲ
(ಜ್ಯೋತಿಷ್ಮತಿ ಪ್ರಕಾಶನ) – ಅಜ್ಜರಕಾಡು, ದ. ಕನ್ನಡ ೧೯೮೩
ಪುಟ ೧೨೪

೬. ಸಾಹಿತ್ಯ ಸೃಜನಶೀಲತೆ ಮತ್ತು ನಾನು – ಯಶವಂತ ಚಿತ್ತಾಲ
ಜ್ಯೋತಿಷ್ಮತಿ ಪ್ರಕಾಶನ – ಅಜ್ಜರಕಾಡು, ದ. ಕನ್ನಡ ಹನೇಹಳ್ಳಿ
೧೯೮೩ ಪುಟ ೧೬

೭. ಸಾಹಿತ್ಯದ ಸಪ್ತಧಾತುಗಳು – ಯಶವಂತ ಚಿತ್ತಾಲ ಧರಣಿ ಪ್ರಿಂಟರ್ಸ್
ಬೆಂಗಳೂರು – ೧೦, ೨೦೧೦ ಪುಟ ೨೬

೮. ಸಾಹಿತ್ಯದ ಸಪ್ತಧಾತುಗಳು – ಯಶವಂತ ಚಿತ್ತಾಲ ಧರಣಿ ಪ್ರಿಂಟರ್ಸ್
ಬೆಂಗಳೂರು – ೧೦, ೨೦೧೦ ಪುಟ ೩೭

೯. ಸಮಗ್ರ ಕಥೆಗಳು. ಸಂಪುಟ – ೨
ಯಶವಂತ ಚಿತ್ತಾಲರ ಕಥೆಯಾದಳು ಹುಡುಗಿ ಟಿ.ಪಿ. ಅಶೋಕ ೨೦೧೨
ಪ್ರಿಸಮ್ ಬುಕ್ಸ್ ಪ್ರೈ. ಲಿ. ಬೆಂಗಳೂರು. ಪುಟ ೧೨೧೧

೧೦. ಸಮಗ್ರ ಕಥೆಗಳು. ಸಂಪುಟ – ೨
ಯಶವಂತ ಚಿತ್ತಾಲರ ಕಥೆಯಾದಳು ಹುಡುಗಿ ಟಿ.ಪಿ. ಅಶೋಕ ೨೦೧೨
ಪ್ರಿಸಮ್ ಬುಕ್ಸ್ ಪ್ರೈ ಲಿ. ಬೆಂಗಳೂರು. ಪುಟ ೧೨೦೨

೧೧. ಸಾಹಿತ್ಯ ಸೃಜನಶೀಲತೆ ಮತ್ತು ನಾನು – ಯಶವಂತ ಚಿತ್ತಾಲ
ಸಾಮಾನ್ಯ ಭಾಷೆ ಕಾವ್ಯ ಭಾಷೆ – ಜ್ಯೋತಿಷ್ಮತಿ ಪ್ರಕಾಶನ, ಅಜ್ಜರ ಕಾಡು
ಉಡುಪಿ, ೧೯೯೩ ಪುಟ ೯೯

೧೨. ಸಾಹಿತ್ಯ ಸೃಜನಶೀಲತೆ ಮತ್ತು ನಾನು – ಯಶವಂತ ಚಿತ್ತಾಲ
ಸಾಮಾನ್ಯ ಭಾಷೆ ಕಾವ್ಯ ಭಾಷೆ – ಜ್ಯೋತಿಷ್ಮತಿ ಪ್ರಕಾಶನ, ಅಜ್ಜರ ಕಾಡು
ಉಡುಪಿ, ೧೯೯೩ ಪುಟ ೧೦೧

೧೩. "ಕಥೆಯಾದಳು ಹುಡುಗಿ" ಯಶವಂತ ಚಿತ್ತಾಲ
ಪ್ರಿಸಮ್ ಬುಕ್ ಹೌಸ್, ಬೆಂಗಳೂರು - ೨೦೦೯ - ಪುಟ ೪೯

೧೪. ಸಾಹಿತ್ಯದ ಸಪ್ತಧಾತುಗಳು - ಯಶವಂತ ಚಿತ್ತಾಲ ಧರಣಿ ಪ್ರಿಂಟರ್ಸ್
ಬೆಂಗಳೂರು - ೧೦, ೨೦೧೦ ಪುಟ ೩೦

೧೫. "ಕಥೆಯಾದಳು ಹುಡುಗಿ" ಯಶವಂತ ಚಿತ್ತಾಲ
ಪ್ರಿಸಮ್ ಬುಕ್ ಹೌಸ್, ಬೆಂಗಳೂರು - ೨೦೦೯ - ಪುಟ ೩೦

೧೬. "ಕಥೆಯಾದಳು ಹುಡುಗಿ" ಯಶವಂತ ಚಿತ್ತಾಲ
ಪ್ರಿಸಮ್ ಬುಕ್ ಹೌಸ್, ಬೆಂಗಳೂರು - ೨೦೦೯ - ಪುಟ ೩೦

೧೭. ಸಾಹಿತ್ಯ ಸಂಪರ್ಕ- ಟಿ.ಪಿ. ಅಶೋಕ ೧೯೮೬ ಪುಟ ೫೦

೧೮. "ಕಥೆಯಾದಳು ಹುಡುಗಿ" ಯಶವಂತ ಚಿತ್ತಾಲ
ಪ್ರಿಸಮ್ ಬುಕ್ ಹೌಸ್, ಬೆಂಗಳೂರು - ೨೦೦೯ - ಪುಟ ೬೪

೧೯. "ಕಥೆಯಾದಳು ಹುಡುಗಿ" ಯಶವಂತ ಚಿತ್ತಾಲ
ಪ್ರಿಸಮ್ ಬುಕ್ ಹೌಸ್, ಬೆಂಗಳೂರು - ೨೦೦೯ - ಪುಟ ೭೧

